ಕಲ್ಪನಾ ಗ್ರಂಥಮಾಲೆ—೧೧



# ಬಾರತದ ಭವ್ಯ ಸಿದ್ಧತೆ

—ಶಿಂಪಿ ಲಿಂಗಣ್ಣ—

ಕಲ್ಪನಾ ಗ್ರಂಥ ಪ್ರಕಾಶನ ಸಮಿತಿ
ಹುಬ್ಬಳ್ಳಿ

# ಕಲ್ಪನಾ ಪರಿಚಯ

**ಪ್ರಿಯ ಸುಹೃದ,**

ಕಲ್ಪನಾ ನಮಗೆ ಪ್ರಿಯದರ್ಶಿನಿಯಾಗಬೇಕು. ಆಕೆ ಕೋಮಲೆ, ರೂಪವತಿ, ರಾಗಿಣಿ. ಎಲ್ಲಕ್ಕೂ ಮಿಗಿಲಾಗಿ ಅವಳು ತಪಸ್ವಿನಿ. ಅವಳ ಮಾತು ಮುತ್ತು. ನಡತೆ ಗಂಭೀರ. ಧ್ಯೇಯ ಪವಿತ್ರತಮ. ವಸಂತಲಕ್ಷ್ಮಿಯಂತೆ ತನ್ನ ಚಾರಿತ್ರ್ಯ ನಿರ್ಮಲವಾಗಬೇಕು. ವನಕುಸುಮದಂತೆ ತನ್ನ ಜೀವನ ವಿಕಸಿತವಾಗಬೇಕು. ಅದರಿಂದಾಗಿ ತನ್ನ ಸುತ್ತಣ ಬಾಳನ್ನು ಬೆಳಗಿಸಿ, ಜನಮನವನ್ನು ರಂಜಿಸಿ, ಅವರ ಬದುಕಿನ ಮಾತನ್ನು ಮೇಲಕ್ಕೆತ್ತಿ ನಯಗೊಳಿಸಿ, ಮನುಜಲೋಕವನ್ನೇ ಮಂದಾರಲೋಕವನ್ನಾಗಿ ಪರಿವರ್ತನಗೊಳಿಸಬೇಕೆಂಬ ಹಂಬಲವುಳ್ಳಾಕೆ ನಮ್ಮ ಕಲ್ಪನಾ.

ಈ ನಮ್ಮ ಸ್ವರ್ಣಸ್ವಪ್ನರಂಗಿನಿ ಕಲ್ಪನಾ, ನಿಮ್ಮ ಹೆಮ್ಮಗಳು. ಕನ್ನಡ ನಾಡಿನ ಕಿರುಮಕ್ಕಳು, ಮಾಮೂಗಳು, ಕಾವ್ಯ ಪ್ರಯೋಗ ಪರಿಣತಮತಿಗಳು—ಎಲ್ಲರೂ ಇವಳ ಉಡಿಯಲ್ಲಿ ಹಣ್ಣು ಕಾಯಿ ತುಂಬಿ, ಹಣೆಗೆ ಕುಂಕುಮವಿಟ್ಟು ಸರ್ವಮಂಗಲೆಯಾಗಲೆಂದು ಹರಕೆಯನ್ನೀಯಬೇಕೆಂದು ನಾವು ವಿನಯ ಪೂರ್ವಕವಾಗಿ ಕೋರುತ್ತೇವೆ.

ಲಲಿತ ಸಾಹಿತ್ಯ, ಬೌದ್ಧಿಕ ಸಾಹಿತ್ಯ—ರಂಜನೆ, ಬೋಧನೆ—ಜನಮನದ ವಿಕಾಸಕ್ಕಾಗಿ, ಸಂಸ್ಕಾರಕ್ಕಾಗಿ ಯಾವ ಸಾಹಿತ್ಯವನ್ನೆಲ್ಲ ಒದವಿಸಬೇಕೋ ಅದನ್ನೆಲ್ಲ ನಾವು ಕಷ್ಟಪಟ್ಟು ಹುಡುಕಿ ತಂದು ನಮ್ಮ ಪಾಲಿನ ಕಾರ್ಯವನ್ನು ವಿಶ್ವಾಸದಿಂದ ಮಾಡುತ್ತೇವೆ. ಕಲ್ಪನಾ ಈ ನೆಲದ ಮಗಳಾಗಬೇಕೆಂಬ ಔದಾರ್ಯ ಮಾತ್ರ ನೀವು ತೋರಬೇಕು.

ಅರವಿಂದರ ಪತ್ರಗಳು' 'ಮುಗಿಲ ಜೇನು' 'ಭಾರತದ ಭವ್ಯವಿಭೂತಿ' ಪ್ರಕಟನೆಗಳ ಮೂಲಕ ಸಿಂಪಿ ಲಿಂಗಣ್ಣನವರು 'ಕಲ್ಪನಾ'ಗೆ ಹತ್ತಿರದವರಾಗಿದ್ದಾರೆ. ಪುಸ್ತಕ ಪ್ರಕಾಶನ ಕಾರ್ಯವು ನಮಗೆ ಪವಿತ್ರವಾದ ದುಡಿಮೆ. ಇದರಲ್ಲಿ ನಮಗೆ ಸುಖವಿದೆ, ಹಿತವಿದೆ, ಪುಣ್ಯವಿದೆ. ನಿಮ್ಮೆಲ್ಲರ ನೆರವಿನಿಂದ ನಾವು ನಮ್ಮ ಕರ್ತವ್ಯವನ್ನು ಸಂತೋಷದಿಂದ ಪೂರೈಸಬಯಸುತ್ತೇವೆ.

ಕಲ್ಪನಾ ಗ್ರಂಥಮಾಲಾ
ಹುಬ್ಬಳ್ಳಿ, ೧೫-೮-೫೦

ಹಿರೇಮಲ್ಲೂರ ಈಶ್ವರನ್
ಪ್ರಧಾನ ಸಂಪಾದಕರು

# ಅರಿಕೆ.

“ಭಾರತದ ಭವ್ಯಸಿದ್ಧತೆ” ಯ ಕೊನೆಯ ಪ್ರಕರಣವನ್ನು ಬಿಟ್ಟು ಉಳಿದ ಭಾಗವನ್ನೆಲ್ಲ ೧೯೪೩ನೆಯ ಸಪ್ಟಂಬರದಲ್ಲಿ ಬರೆದು ಮುಗಿಸಿದ್ದಾಗಿದೆ. ಅದೇ ವರುಷ ಅಗಸ್ಟದಲ್ಲಿ ಶ್ರೀ ಅರವಿಂದರ ಪ್ರಥಮದರ್ಶನವು ನನಗೆ ಲಭಿಸಿತ್ತು. ೧೯೨೪ರಲ್ಲಿ ಶ್ರೀ ಅರವಿಂದರು ಬರೆದ ಒಂದು ಪತ್ರದಲ್ಲಿಯ “ಇನ್ನು ೩೦-೪೦ ವರ್ಷಗಳಲ್ಲಿ ಜಗತ್ತಿನ ರೀತಿಯು ತಿರವು ಮುರವಾಗಿ ಅವುಗಳಲ್ಲಿ ಭಾರತದ ಸಂಸ್ಕೃತಿಯೇ ತಲೆಯೆತ್ತಿ ನಿಲ್ಲುವದು. ಅದರಿಂದಲೇ ಸರ್ವ ಜಗತ್ತಿನ ಕಲ್ಯಾಣದಾರಿ ಕಾಣಿಸಿಕೊಳ್ಳುವದು.” ಎಂಬರ್ಥದ ಭವಿಷ್ಯವನ್ನು ಗ್ರಹಿತವಾಗಿರಿಸಿಕೊಂಡು “ಭಾರತದ ನವಜನ್ಮ” ಎಂಬ ಅವರ ಪುಸ್ತಕದೊಳಗಿನ ಸಿದ್ಧಾಂತಗಳನ್ನು ಮೈಲುಗಲ್ಲುಗಳಂತೆ ಬಳಸಿಕೊಂಡು ಭಾರತದ ಇತಿಹಾಸವನ್ನು ನಿರೀಕ್ಷಿಸಿ, ಭವಿಷತ್ತಿನಲ್ಲಿ ಭಾರತವು ವಹಿಸಲಿರುವ ಪಾತ್ರದ ಭವ್ಯಸಿದ್ಧತೆಯನ್ನು ರೇಖಿಸಿರುವೆನು. ಕೊನೆಯ ಪ್ರಕರಣವನ್ನು ಪೂರಕವಾಗುವಂತೆ ಕಳೆದ ವರುಷ ಬರೆದು ಪೂರ್ಣಗೊಳಿಸಿರುವೆನು.

ಇದನ್ನು ನನ್ನ ಅನೇಕ ಮಿತ್ರರಿಗೂ, ಹಿರಿಯರಿಗೂ ಓದಿ ತೋರಿಸಿದಾಗ ಅವರು ವಿಲಕ್ಷಣವಾದ ಸಂತೋಷವನ್ನು ವ್ಯಕ್ತಗೊಳಿಸಿದರು. ಪಾಂಡಿಚೇರಿಯಲ್ಲಿ ನೆಲೆಸಿಂತ ಹಿರಿಯ ಸಹೋದರರಾದ ಶ್ರೀ. ಶಂಕರಗೌಡರು ಒಂಟಮುರಿ ಅವರು—“ಈ ಇತಿಹಾಸವು ಸೊಗಸಾಗಿದೆ; ರಸಭರಿತವಾಗಿದೆ. ನಮ್ಮ ಜನಕ್ಕೆ ಹೊಸದೃಷ್ಟಿ ಕೊಡುವಂಥದಾಗಿದೆ.” ಎಂದು ಬರೆದು ತಿಳಿಸಿದರು. ಅವರ ಈ ಪತ್ರವೂ, ಶ್ರೀ. ಮಧುರಚೆನ್ನರು ನೀಡಿದ ಉತ್ಸಾಹವೂ, ಶ್ರೀ. ಮಾಸ್ತಿ ಅವರು ತಮ್ಮ ‘ಜೀವನ’ ಮಾಸಿಕದಲ್ಲಿ ಒಂದೆರಡು ಮುಖ್ಯ ಪ್ರಕರಣಗಳನ್ನು ಮುದ್ರಿಸಿ ಕೊಡಮಾಡಿದ ಉತ್ತೇಜನವೂ ಇದನ್ನು ಪುಸ್ತಕ ರೂಪದಲ್ಲಿ ತರಲಿಕ್ಕೆ ಕಾರಣವಾದವೆನ್ನಬೇಕು. ಆದರೆ ಚಡಚಣದ ಶ್ರೀ. ಸಂಗಮೇಶ್ವರ ಸಂಸ್ಥೆಯ ನನ್ನ ಮಿತ್ರರು ಸಾಕಷ್ಟು ಧನಸಹಾಯ ಕೊಡುವ ಭರವಸೆ ಕೊಟ್ಟಿರದಿದ್ದರೆ ಈ ಕೆಲಸವು ಮೂರ್ತಸ್ವರೂಪಕ್ಕೆ ಬರಲು ತಡವಾಗುತ್ತಿತ್ತು.

ಕಲ್ಪನಾ ಗ್ರಂಥಮಾಲೆಯಲ್ಲಿ ಪವಣಿಸಲು ಮುಂದೆ ಬಂದ ಪ್ರೊ. ಈಶ್ವರನ್‌ರನ್ನೂ, ಸುಂದರವಾಗಿ ಮುದ್ರಿಸಿಕೊಟ್ಟ ತೋಂಟದಾರ್ಯ ಪ್ರೆಸ್ಸಿನ ವ್ಯವಸ್ಥಾಪಕರನ್ನೂ ಮರೆಯದೆ ಅಭಿವಂದಿಸುವೆನು.

ಚಡಚಣ, ೨೪-೬-೫೦

**ಕಣ್ಮರೆಯಾದ**

ಗೆಳೆಯ ಕಾಪಸೆ ರೇವಪ್ಪನವರಿಗೆ

# ಪರಿವಿಡಿ




| | | |
|---|---|---|
| (೧) | ಭಾರತದ ಭವಿತವ್ಯ | ೧ |
| (೨) | ಮಹಮ್ಮದೀಯರ ಆಗಮನ | ೮ |
| (೩) | ಐರೋಪ್ಯ ಸಂಬಂಧ | ೧೬ |
| (೪) | ಏಚ್ಛತ್ರ ಭಾರತ | ೨೪ |
| (೫) | ಯುಗ ಪ್ರಭಾತ | ೪೩ |
| (೬) | ದಿವ್ಯರಾಜ್ಯ | ೫೩ |

# ೧ ಭಾರತದ ಭವಿತವ್ಯ

ಭಾರತದ ಭವಿತವ್ಯವನ್ನು ಅರಿಯುವ ಮೊದಲು, ಸದ್ಯಕ್ಕೆ ಕಾಣುವ ದೃಶ್ಯವೇನೆಂಬುದನ್ನು ನೋಡುವುದು ಒಳಿತು. ವ್ಯಾವಹಾರಿಕವಾಗಿ ಭಾರತವು ಪಾರತಂತ್ರ್ಯದೇಶವಿದ್ದುದು ಇದೀಗ ಸ್ವತಂತ್ರವಾಗಿದೆ. ಅತಿ ಮಂದವಾಗಿ ಮಿಡಿಯುತ್ತಿರುವ ಧರ್ಮದ ಜೀವನಾಡಿಯು ಇದೀಗ ಮಿಸುಗಾಡತೊಡಗಿದೆ. ಹಣ ಪ್ರಪಂಚದಲ್ಲಿ ಹೆಣಕ್ಕಿಂತ ಕಡೆ ಆಗಿದ್ದೇವೆ. ಅತ್ಯಂತ ಸ್ಥೂಲವಿಭಾಗವಾದ ಶರೀರವು ಅತ್ಯಂತ ಸೂಕ್ಷ್ಮತರ ಅಂದರೆ ಕ್ಷೀಣವಾಗಿದೆ. ಜಾತಿಮತ ಮತಾಂತರಗಳು ತಾಂಡವವಾಡುತ್ತಿವೆ. ಕ್ರಿಯಾಶಕ್ತಿಯು ಶೂನ್ಯಾಂಶಕ್ಕೆ ಇಳಿದಿದೆ. ಅಕ್ಷರಜ್ಞಾನವು ಕ್ಷಯಕ್ಕೀಡಾಮದರ ಅರಿವಾಗಿದೆ. ಇವೆಲ್ಲ ಲಕ್ಷಣಗಳು ಭಾರತದ ಹೀನಸ್ಥಿತಿಯನ್ನೂ, ವಿಪನ್ನಾವಸ್ಥೆಯನ್ನೂ ತೋರಿಸುತ್ತಲಿವೆ. ಹತ್ತೊಂಬತ್ತನೆಯ ಶತಮಾನದಲ್ಲಿಯೇ ಅದರ ವಿಭೂತಿ ನಿಶ್ಯೆಯಾಗಿತ್ತು. "ಹದಿನೆಂಟು ಹತ್ತೊಂಬತ್ತನೆಯ ಶತಮಾನಗಳು ಭಾರತದ ಕರ್ಮವಿಪಾಕದ ಹೊತ್ತು ಆ ಹೊತ್ತಿನಲ್ಲಿ ಒಂದು ಸಣ್ಣ ಕಮುಹೂರ್ತದ ಮಟ್ಟಿಗಾದರೂ ಖಂಡಿತವಾಗಿಯೂ ಭಾರತದ ವೈಶ್ವಾನರನು ನಂದಿಯೇ ಹೋಪನೇನೋ ಎನ್ನುವ ಕೆಡುಗಾಲವು ಬಂದಿತ್ತು" ಎಂದು ಶ್ರೀ ಅರವಿಂದರು ಹೇಳುತ್ತಾರೆ. ಆದರೆ ಈ ದೀರ್ಘನಿದ್ರಾವಸ್ಥೆಯೊಳಗಿಂದ ಭಾರತವು ಏಳಲಾರದೇ, ಎಂದು ತಜ್ಞರು ಪರೀಕ್ಷಿಸಿದ್ದಾರೆ; ದೇಶವತ್ಸಲರು ನಿರೀಕ್ಷಿಸಿದ್ದಾರೆ. ಯೋಗಿಗಳು ದೃಷ್ಟಿಸಿದ್ದಾರೆ "ನಿಶ್ಚೇಷ್ಟಿತವಾಗಿ ಬಿದ್ದಿರುವ ಭಾರತಕ್ಕೆ ಏನೂ ಬೇಡ, ಅದರ ರಾಜಸವೃತ್ತಿಯನ್ನು ಎಬ್ಬಿಸಿದರೆ ಸಾಕು "ಎಂದು" ವಿವೇಕಾನಂದರು ಗುಡುಗಿದರು. "ಸ್ವರಾಜ್ಯವೊಂದರಿಂದಲೇ ಭಾರತದ ಸರ್ವ ಕೊರತೆಗಳು ತುಂಬಿ ಬರುತ್ತವೆ"ಎಂದು ದಾದಾಭಾಯಿ ನವರೋಜಿಯವರು ಉಸುರಿದರು. "ಸ್ವರಾಜ್ಯವು ಜನ್ಮಸಿದ್ಧ ಹಕ್ಕು. ಅದನ್ನು ಪಡೆದರೆ ಎಲ್ಲವೂ ಸರಿಹೊಂದುವದು" ಎಂದು ತಿಲಕರು ತಾವು ಸಾವ್ರತರಾಗಿ ಮಲಗಿದ ಜನರನ್ನು ಬಡಿದೆಬ್ಬಿಸಿದರು. "ಸತ್ಯ ಅಹಿಂಸೆಗಳೇ ಭಾರತವನ್ನು ಜಗತ್ತಿನಲ್ಲಿ ತಲೆಯೆತ್ತಿ ನಿಲ್ಲಿಸಲು ಸಮರ್ಥ

ವಾದ ಉಪಾಯಗಳು ” ಎಂದು ಗಾಂಧಿಯವರ ತತ್ತ್ವ. ಮೊದಲು ಸಾರ್ವತ್ರಿಕ ಶಿಕ್ಷಣಬೇಕೆಂದು ಕೆಲವರೂ, ಆರ್ಥಿಕಸ್ಥಿತಿಯ ಸುಧಾರಣೆಯು ಅವಶ್ಯವೆಂದು ಹಲವರೂ ಪ್ರತಿಪಾದಿಸುತ್ತಿದ್ದಾರೆ. ವಿಜ್ಞಾನ ಪ್ರಸಾರದ ಮಹತ್ವವನ್ನು ಒಬ್ಬರು ಹೇಳಿದರೆ, ಸೈನ್ಯ ಶಿಕ್ಷಣವು ತರಣೋಪಾಯ ವೆಂದು ಇನ್ನೊಬ್ಬರು ಹೇಳುತ್ತಾರೆ. ಹೀಗೆ ಹಲವರು ಹಲವು ಬಗೆಯ ಹಾದಿ ತೋರಿಸಿದರೂ ಬಿಡಿಬಿಡಿಯಾಗಿ ಕೇಳಿದಾಗ ಅವೆಲ್ಲವೂ ಸರಿಯಾದ ವುಗಳೇ ಎಂದು ಅನಿಸುವದರಿಂದ ಅವು ಖಂಡಸತ್ಯಗಳೆಂದಂತಾಯಿತು. ಅವು ಖಂಡ ಸತ್ಯಗಳಾದರೂ ಕಂಡಸತ್ಯಗಳು. ಆದರೆ ಈ ಖಂಡ ಸತ್ಯ ಗಳನ್ನು ಅಖಂಡಸತ್ಯಗಳನ್ನು ಅಖಂಡವಾಗಿ ಹೇಳಿದರೆ ಅದು ಪೂರ್ಣ ಸತ್ಯವೆನಿಸಬಹುದಲ್ಲವೇ ? ಹಾಗೆ ಹೇಳಿದವರೂ ಉಂಟು ಅವರು. ಯಾರೆಂದರೆ ಶ್ರೀ ಅರವಿಂದರು. ಅವರು ಹೇಳಿರುವದೇನಂದರೆ— “ ಭಾರತದ ಹೀನಸ್ಥಿತಿಗೆ ಅದರ ಧರ್ಮಹೀನತೆಯಾಗಲಿ, ಪಾರತಂತ್ರ್ಯ ವಾಗಲಿ ಕಾರಣವಾಗಿರದೆ, ವಿಚಾರ ಶೂನ್ಯತೆಯೇ ಅದಕ್ಕೆ ಕಾರಣವಾ ಗಿದೆ. ವಿಚಾರ ಮಾಡುವ ಶಕ್ತಿಯೇ ನಮ್ಮಲ್ಲಿಲ್ಲ. ಶಕ್ತಿಯಿದ್ದ ಕೆಲವರಿಗೆ ವಿಚಾರಮಾಡುವ ಮನಸ್ಸಿಲ್ಲ ” ಈ ಎಲ್ಲ ಉಪಾಯಗಳು ಹೇಳಲ್ಪಡು ವುದರ ಮೇಲಿಂದ ಕಂಡು ಬರುವುದೇನಂದರೆ ಭಾರತಕ್ಕೆ ತನ್ನ ಪ್ರಬಲ ರೋಗದ ಅರಿವು ಆಗಿದೆ. ಅಂತೆಯೇ ಅದು ನಿರೋಗಿಯೂ ಶಕ್ತಿಶಾಲಿಯೂ ಆಗಬೇಕೆಂದು ತಡವರಿಸುತ್ತಿದೆ. ಅದಕ್ಕೆಂತಲೇ ತಿಳಿದವರು ತಿಳಿದಂತೆ ಉಪಾಯಗಳನ್ನು ಹುಡುಕುತ್ತಲಿದ್ದಾರೆ, ಉಪಚಾರಗಳನ್ನು ಮಾಡುತ್ತ ಲಿದ್ದಾರೆ. ಇದು ಭಾರತವು ಜಾಗ್ರತವಾಗುತ್ತಿರುವ ಲಕ್ಷಣ; ನಿದ್ರೆ ಕಳೆದುದರ ಚಿಹ್ನ.

ಭಾರತದ ನಿದ್ರೆಯು ಇಂದು ನಿನ್ನೆಯದಲ್ಲ; ಹತ್ತಿಪ್ಪತ್ತು ಅಥವಾ ನೂರಿನ್ನೂರು ವರುಷಗಳದಲ್ಲ. ದೀರ್ಘಕಾಲದ ನಿದ್ರೆ; ಆದರೆ ದೀರ್ಘ ಕಾಲದ ನಿದ್ರೆಯೂ ಒಮ್ಮೊಮ್ಮೆ ದೀರ್ಘ ನಿದ್ರೆಯೆನಿಸುವಷ್ಟು ಗಾಢ ವಾಗುತ್ತಿರುವದುಂಟು. ಸಾಮ್ರಾಜ್ಯಗಳು ಅಳಿದವು; ಕೋಟೆ-ಕೊತ್ತಲ ಗಳು ಇಳಿದವು; ಕಲೆಗಳು ಕಳೆಗೆಟ್ಟವು; ಉದ್ಯೋಗಗಳು ಕೈಬಿಟ್ಟವು. ಭಾರತ ಪುರುಷನ ಅಂಗಾಂಗಗಳೆಲ್ಲವೂ ಸೋತು ನಿಶ್ಚೇಷ್ಟಿತವಾಗಿ

ಬಿದ್ದವು. ಬಿದ್ದ ಕೊರಡು; ಅದಕ್ಕೆ ಯಾರು ತುಳಿದರೂ ಅರಿವಿಲ್ಲ; ಎಲ್ಲಿ ಎಳೆದರೂ ಪರಿವಿಲ್ಲ. ಕಡಿದರೆ ನೋವಿಲ್ಲ; ಸುಟ್ಟರೆ ಕಾವಿಲ್ಲ. ಎಂಥ ನಿದ್ರೆಯಿದು? ಯಾರಾದರೂ ನಂಜನೂಡಿ ಮಲಗಿಸಿದರೆ? ಅಂಥ ನಿದ್ದೆಹೋಕತನವೂ ಒಂದು ರೋಗವೇ ಏನು? ಈ ಮಾತಿಗೆ ಸಮಾಧಾನವೆಂದು ಶ್ರೀ ಅರವಿಂದರ ಒಂದು ಮಾತನ್ನು ಇಲ್ಲಿ ಲಕ್ಷ್ಯಿಸಬೇಕು. ಅದೇನೆಂದರೆ — "ಹೋದ ಮೂರುಸಾವಿರ ವರುಷಗಳ ವರೆಗೂ— ಅದಕ್ಕೂ ಹೆಚ್ಚೇಕಾಲವೆನ್ನಬೇಕು—ಭಾರತವು ಅತಿಯಾಗಿ, ಅವಿಶ್ರಾಂತವಾಗಿ, ಧುರಂಧರಿಯಿಂದ ಕೊನೆದೋರದ ಅನೇಕ ಮುಖತೆಯಿಂದ ಸೃಷ್ಟಿಕಾರ್ಯ ನಡೆಸಿದೆ. ರಾಜ್ಯ-ರಾಜ್ಯಾಂಗ, ಕೆರೆ-ಕಟ್ಟೆಗಳು, ಉದ್ಯೋಗ-ವ್ಯವಹಾರಗಳು, ಯಾವುದೂ ಉಳಿಯಲಿಲ್ಲ-ಪಿತ್ತತಲೆಗೇರಿದಂತೆ ಕಾರ್ಯೋನ್ಮಾದವು ಕಂಡು ಬರುವಂತಿದೆ. ಸೃಷ್ಟಿವಿಸ್ತಾರ ಮಾಡೇ ಮಾಡಿತು. ತಣಿವಿಲ್ಲ, ದಣಿವಿಲ್ಲ; ಮುಗಿತಾಯವಿಲ್ಲ. ಜಪ್ಪುಜಾಪತ್ತು ಎಂದು ಬಿದ್ದುಕೊಳ್ಳಲು ವಿರಾಮ ಕಾಲವೂ ಇಲ್ಲ". ಭಾರತದ ಈ ಕರ್ಮಧುರಂಧರತೆಗೆ ಐರೋಪ್ಯ ವಿಮರ್ಶಕರು— "ಒಂದು ಖಂಡದಲ್ಲಿ ಇಡಿಯ ಬ್ರಹ್ಮಾಂಡವನ್ನು ತುರುಕುವ ಪ್ರವೃತ್ತಿ"ಯೆಂದು ಗೊಣಗುವರಂತೆ. ಅಷ್ಟು ದೀರ್ಘಕಾಲ, ಅಂಥ ಶ್ರಮ, ಅಷ್ಟೊಂದು ಕಾರ್ಯ ಮಾಡಿದವನಿಗೆ ಕೆಲಸವು ಹಿಮ್ಮೆಟ್ಟಿದ ಬಳಿಕ ಮೈಗೆ ದಣಿವು ಆಗದೇ? ಮನಸ್ಸಿಗೆ ಬೇಸರ ಅನಿಸದೇ? ದಿನಾಲು ಆರೆಂಟು ತಾಸು ದುಡಿದ ಮನುಷ್ಯನು ಏಳೆಂಟು ತಾಸು ನಿದ್ರೆ ಬೇಡುತ್ತಾನಷ್ಟೇ? ಮೂರುಸಾವಿರ ವರುಷ ಪರಿಶ್ರಮ ಪಟ್ಟ ಭಾರತಕ್ಕೆ ಕೆಲವು ಶತಮಾನಗಳ ನಿದ್ರೆ-ವಿಶ್ರಾಂತಿ ಬೇಡವೇ? ಬ್ರಹ್ಮನ ಹಗಲು-ರಾತ್ರಿಗಳಿದ್ದಂತೆ, ಭಾರತದ ಆತ್ಮಕ್ಕೂ ಹಗಲು-ರಾತ್ರಿಗಳಿರಬಹುದಲ್ಲವೇ? ಅದರ ಉದ್ಯೋಗದ ಕಾಲಾವಧಿಯು ಹಗಲು; ನಿದ್ರೆಯ ಕಾಲಾವಧಿಯು ಇರುಳು, ರವೀಂದ್ರರ ಮಾತಿನಲ್ಲಿ ಹೇಳುವದಾದರೆ "ಕಳೆದುಹೋಯಿತು ಹಗಲು; ಎನ್ನುತ ಕಳೆಯದಿರು ಕಣ್ಣೀರು ಕಷ್ಟದಿ" ಯಾಕಂದರೆ ಹಗಲು ಕಳೆದಂತೆ ರಾತ್ರಿಯೂ ಕಳೆಯಬೇಕು. ಈಗ ರಾತ್ರಿ ಕಳೆದಿರುವ ಚಿಹ್ನೆಗಳೂ ಕಂಡುಬರುತ್ತಿವೆ.

ಕವಿಗಳು ಹಕ್ಕಿಗಳಿದ್ದಂತೆ, ಹಕ್ಕಿಗಳ ಉಲುಹು ನಸುಕಿನಲ್ಲಿ. ಅವರೀಗ ಉದಯರಾಗ ಹಾಡುತ್ತಿದ್ದಾರೆ. “ಉದಯವಾಗಲಿ ನಮ್ಮ ಚೆಲುವು ಕನ್ನಡ ನಾಡೆ”ಂದು ಒಂದು ಹಿರಿಹಕ್ಕಿ ಹಾಡಿ ಒಂದು ಪಟ್ಟ ಕಳೆಯಿತು. “ಏಳು ಶೂರರ ಖಣೀ, ಏಳು ಧೀರರ ರಾಣಿ” ಎಂದು ‘ಶೀರವ ವೀರರಸದ ವಾಣಿ’ಯನ್ನು ಅವಧೂತ ಹಕ್ಕಿಯು ಏಕನಾದದಲ್ಲಿ ಸ್ವರ ತೆಗೆದು ಉಲಿಯತೊಡಗಿದೆ. “ಏಳಮ್ಮ ಏಳಮ್ಮ! ಏಳೆನ್ನ ತಾಯಮ್ಮ!! ಏಳದೆ ಜೀವ ಕೇಳದ” ಎಂದು ಜಗನ್ಮಾತೆಯನ್ನು ಕವಿಶಿಶುವು ಕೆಣಕಿ ಕನವರಿಸುತ್ತಿದೆ. “ಯೋಗದ ಹರಿ ಬಂದಿಹನು ಏಳಿರಿ” ಯೆನ್ನುತ್ತ ಬುಡಬುಡಕಿಯು ಊರಲ್ಲಿ ಅಡ್ಡಾಡುತ್ತಿದ್ದಾನೆ. ಗರಡಿಯಮನೆಯಲ್ಲಿ ಜಟ್ಟಿಗಳು ಮಂಡಿ ಹೊಡೆಯುತ್ತಿದ್ದಾರೆ; ಜ್ಞಾನೇಚ್ಛುಗಳು ಅಮರಕೋಶವನ್ನು ಪಠಿಸುತ್ತಿದ್ದಾರೆ. ಗರತಿಯರು ಲಗುಬಗೆಯಿಂದ ಬೀಸಲು ಹಾಕಿ ತಮ್ಮ ಹಾಡಿಗೆ ತೊಡಗಿದ್ದಾರೆ; ನೇಗಿಲಯೋಗಿಯ ಹೊಸಹೋರಿಗಳ ಕೊರಳಗಂಟೆಯ ಟಂಗ್‌ಕಾರವು ಕೇಳಿ ಬರುತ್ತಲಿದೆ; ಹೂವಿನಂತೆ ಅರಳುಮುಖದೊಡನೆ ಕೆಲವು ಮಕ್ಕಳು ಎದ್ದಿವೆ; ಇನ್ನು ಕೆಲವು ‘ಏನಾರೆ ಬೇಕೆ’ನ್ನುವಂಥ ಬೆಳಗಿನಳುವು ತೆಗೆದಿವೆ.

ಅಂತು ಭಾರತದ ಸರ್ವ ಅಂಗಗಳೂ ತಂತಮ್ಮ ಕೊರತೆಗಳನ್ನು ತುಂಬಿಕೊಳ್ಳುವ ಎತ್ತುಗಡೆಯಲ್ಲಿವೆ. ಹೇಗೆಂದರೆ— ರಾಷ್ಟ್ರಸ್ವಾತಂತ್ರ್ಯವು ಸರ್ವಭಾರತೀಯರ ಬಯಕೆಯಾಗಿತ್ತು: ಅದು ದೊರಕೊಳ್ಳಲು ಸುವ್ಯವಸ್ಥೆಗೆ ತೊಡಗಿದ್ದಾರೆ: ಭಾರತೀಯರು ಬಲಶಾಲಿಗಳಾಗುವದಕ್ಕೆ ಬಲವಾಗಿ ಹಾರಯಿಸುತ್ತಿದ್ದಾರೆ; ಅವರಿಗೆ ಬಡತನವು ಬೇಡವಾಗಿದೆ; ಸ್ತ್ರೀಯರು ಸಮಾಜ ಪುರುಷನ ಅರ್ಧಾಂಗವೆಂಬ ಅರಿವಾಗಿದೆ; ಅಸ್ಪೃಶ್ಯತೆಯೊಂದು ಹಿಂದೂ ಧರ್ಮದ ಕೊಳೆಯೆಂದು ಅವಹೇಳನಕ್ಕೀಡಾಗಿದೆ. ಜಾತಿವಿಜಾತಿಯ ವಿಚಿತ್ರತೆಯಲ್ಲಿ ಅಸಹ್ಯವುಂಟಾಗಿ, ‘ದೇವನೊಲಿದಾತನೇ ಜಾತ’ನೆಂಬ ತಿಳಿವಳಿಕೆಯು ತಲೆದೋರಿದೆ. ತರುಣರಿಗೆ ಆದರ್ಶದ ದರ್ಶನವಾಗಿದೆ. ಪ್ರಾಚೀನ ಋಷಿಮುನಿಗಳ ಜೀವನವು ಹೆಮ್ಮೆ ಹುಟ್ಟಿಸುತ್ತಿದೆ. ಮೊದಲಿಗರ ಜ್ಞಾನಸಂಪತ್ತಿನ ಒಡೆತನವನ್ನು ಪುನಃ ಸ್ಥಾಪಿಸಿಕೊಳ್ಳುವ ಕುತೂಹಲವು ಕಂಡುಬರುತ್ತಿದೆ. ಕಾರಣ ಪುರುಷನನ್ನು

ಬಳಿವಾಡಿಕೊಳ್ಳುವದಕ್ಕೆ ಪ್ರಾಂತಪ್ರಾಂತಗಳಲ್ಲಿ ಸ್ವಾಗತಮಂಡಳಿಯಂತೆ ಹಿರಿಯಮನಸ್ಸಿನ ಮುಂದಾಳುಗಳು ಮುಂದೆ ಬಂದಿದ್ದಾರೆ. ಆಕಳಿಸುವುದು. ಮೈಮುರಿಯುವುದು, ಮುಖಮಾರ್ಜನೆ, ಕಸಗುಡಿಸುವುದು ಮೊದಲಾದ ಕೃತಿಗಳು ನೋಡಲಿಕ್ಕೆ ಹೇಗೊ ಹೇಗೋ ಅನಿಸಿದರೂ ಅವೆಲ್ಲ ಪ್ರಾತಃ ಕಾಲದಲ್ಲಿ ಮಾಡಿಮುಗಿಸತಕ್ಕ ಅನಿವಾರ್ಯ ಕಾರ್ಯಗಳೇ ಅಲ್ಲವೇ? ಆದರೆ ಇಷ್ಟೆಲ್ಲ ಗಡಬಿಡಿಯದಾತಕ್ಕಾಗಿ?

ಶ್ರೀ ಅರವಿಂದರಿಗೆ (೧೯೦೮) ಈಶ್ವರನಿಂದ ಲಭಿಸಿದ ಒಂದು ದಿವ್ಯ ಸಂದೇಶದಲ್ಲಿ— "ಭಾರತ ವಾಸಿಗಳು ಸನಾತನ ಧರ್ಮದ ಸಲುವಾಗಿ ಏಳುತ್ತಿದ್ದಾರೆ. ಅವರ ಈ ಜಾಗ್ರತಿಯು ಅವರ ಸಲುವಾಗಿ ಇರದೆ ಅದು ಜಗತ್ತಿನ ಸಲುವಾಗಿ ಉಂಟಾಗಿದೆ. ಜಗತ್ತಿನ ಸೇವೆಗೆಂದು ನಾನು ಅವರನ್ನು ವಿಮುಕ್ತರನ್ನಾಗಿ ಮಾಡಲಿದ್ದೇನೆ."

ಜಗತ್ತಿನ ಸಲುವಾಗಿ ಭಾರತದ ಜಾಗ್ರತಿಯೇ? ಭಾರತದ ಸಲುವಾಗಿ ಅಲ್ಲವೇ? ಅಲ್ಲವೇಕೆ ಅಹುದು? ಭಾರತವೂ ಜಗತ್ತಿನ ಒಂದಂಗವೇ. ಭಾರತದ ಈ ದೀರ್ಘ ನಿದ್ರೆಯಲ್ಲಿ ಅದಕ್ಕೆ ಅನೇಕ ರಾಷ್ಟ್ರಗಳಿಂದಲೂ, ಜನಾಂಗಗಳಿಂದಲೂ ಮಹದುಪಕಾರಗಳಾಗಿರುತ್ತವೆ. ಉಪಕಾರ ಮಾಡಿದವರು ತಿಳಿದು ಮಾಡಿರಲಿ, ತಿಳಿಯದೆ ಮಾಡಿರಲಿ: ಕಾರುಣ್ಯವೇ ಇರಲಿ. ಕ್ರೌರ್ಯವೇ ಇರಲಿ ಪರಿಣಾಮವು ಒಳ್ಳೆಯದು ಆಗುತ್ತ ಬಂದಿದೆ. ಅದರಿಂದ ಭಾರತಕ್ಕೆ ಕಲ್ಯಾಣವಾಗಿದೆ. ಮುಸಲ್ಮಾನರ ದಾಳಿ, ಐರೋಪ್ಯರ ವಿಜಯ ಇವುಗಳಿಂದ ಭಾರತದ ಸ್ವಾತಂತ್ರ್ಯವು ತೊಳೆಯಿತು; ಸಂಪತ್ತು ಸೆಳೆಯಿತು; ಶಕ್ತಿ ಸಾಮರ್ಥ್ಯಗಳು ಅಳಿದವು. ಕಲೆ ಕೈಗಾರಿಕೆಗಳು ಕಳೆದವು; ಇದೆಲ್ಲ ನಿಜವೇ. ಆದರೆ ಇಷ್ಟೆಲ್ಲ ತುಳಿತ ದಿಂದ ಭಾರತದ ದೀರ್ಘಕಾಲದ ನಿದ್ರೆಯು ತಿಳಿಯಿತೆನ್ನುವುದೂ ಸುಳ್ಳಲ್ಲ. "ಭಾರತದ ಭಾಗ್ಯಕ್ಕೆ ಬಂದ ಗಂಡಾಂತರದ ಕಾಲದಲ್ಲಿ ಅದರಿಂದಲೇ ಭಾರತದ ಪ್ರಾಣವುಳಿಯಿತೆಂಬುದೂ. ನವಜನ್ಮದ ಪ್ರಾರಂಭಬಿಂದು ವಾದರೂ ಅದೇ ಎಂಬುದೂ ನಿಜವೇ ಸರಿ"ಯೆಂದು ಶ್ರೀ ಅರವಿಂದರ ಅಭಿಪ್ರಾಯವಿದೆ. "ನವದೇಹವನ್ನು ಧಾರಣ ಮಾಡುವಾಗ ಅದಕ್ಕೆ ಸರಿಯಾಗಿ ತತ್ವ, ಕಲೆ, ಸಾಹಿತ್ಯ, ವಿದ್ಯಾಸಂಸ್ಕಾರ, ರಾಜಕಾರಣ.

ಸಮಾಜ ಪದ್ಧತಿಗಳಲ್ಲಿಯೂ ಹೊಸತನವು ಬರಲೇಬೇಕೆಂ”ದು ಅವರು ಭರವಸೆಪಟ್ಟಿದ್ದಾರೆ.

ಶತಶತಮಾನಗಳವರೆಗೆ ಮಾನವನು ಗಳಿಸಿದ ಜ್ಞಾನವನ್ನೂ, ಶಕ್ತಿಯನ್ನೂ, ದುಡಿದ ಶ್ರಮವನ್ನೂ, ರಚಿಸಿದ ಸೌಲಭ್ಯಗಳನ್ನೂ ನಾಶಗೊಳಿಸುತ್ತ ಇಂದು ಪಾಶ್ಚಾತ್ಯ ರಾಷ್ಟ್ರಗಳು ಕಣ್ಣು ನೆತ್ತಿಗೇರಿದವರಂತೆ ಮಾನವ ಸಂಹಾರಲೀಲೆಯಲ್ಲಿ ತೊಡಗಿವೆ. ಇದಕ್ಕೆ ತಂತಮ್ಮ ವಾದವೇ ಸತ್ಯವೆನ್ನುವ ಕುರುಡುಪಕ್ಷಪಾತವೇ ಕಾರಣ. ಈ ಕುರುಡು ಹೋರಾಟದಲ್ಲಿ ಅಲ್ಪರಾಷ್ಟ್ರಗಳು ಅರೆಜೀವಿಯಾದವು; ಪ್ರಬಲರಾಷ್ಟ್ರಗಳು ಮದೋನ್ಮತ್ತವಾದವು. ಈ ತುಳಿತಕ್ಕೆ ಭಾರತದ ಅಂಗಅಂಗಗಳೆಲ್ಲ ಜಬ್ಬುಹೋದರೂ, ನೋವಿಗೀಡಾದರೂ ಸಿದ್ಧ ಮಾತ್ರ ದೂರಾಯಿತೆನ್ನಬೇಕು.

ಮಹಾಯುದ್ಧದಲ್ಲಿ ಅಂಗಹೀನವಾದ ಜನತೆಯು ಯುದ್ಧ ಮುಗಿದರೂ ಬೆನ್ನುಬಿಡದ ಸಂಸಾರ ಸಮರದಲ್ಲಿ—ಜೀವನ ಸಂಗ್ರಾಮದಲ್ಲಿ ಹೋರಾಡಲೇಬೇಕಾಗುತ್ತದೆ. ಈಗಿರುವ ಅತಿ ಸುಧಾರಣೆಯ ಶಸ್ತ್ರಾಸ್ತ್ರಗಳನ್ನು ಉಪಯೋಗಿಸಲು ನಾಳೆ ಅದಕ್ಕೆ ಕೈಗಳೆಲ್ಲಿ ಉಳಿದಿರುವವು ? ಮೇಲಾಗಿ ಈ ಶಸ್ತ್ರಾಸ್ತ್ರಗಳ ಸಂಗತಿಯಿಂದಲೇ ತಮಗಿಂಥ ದುರವಸ್ಥೆಯು ಪ್ರಾಪ್ತವಾಗಿದೆಯೆಂಬ ಅರಿವೂ ಅದಕ್ಕಿರುತ್ತದೆ. ಆದುದರಿಂದ ಆಧುನಿಕ ಶಸ್ತ್ರಾಸ್ತ್ರಗಳು ಅವರಿಗೆ ಉಪಯೋಗ ಬೀಳುವದಿಲ್ಲ. ನಾಳಿನ ಜಗತ್ತಿಗಾಗಿ-ಅದರ ಕಲ್ಯಾಣಕ್ಕಾಗಿ ಆವಶ್ಯಕವೆಂದು ಅಹಿಂಸಾತ್ಮಕ ಸತ್ಯಾಗ್ರಹಾಸ್ತ್ರವು ಗಾಂಧೀಜಿಯವರಿಂದ ರಸಶಾಲೆಯಲ್ಲಿ ಪ್ರಯೋಗಿಸಲ್ಪಟ್ಟು ಸಂಜೀವಿನೀ ಶಕ್ತಿಯೆನಿಸುತ್ತ ಕುಳಿತಿದೆ. ನೊಂದಬೆಂದ ಜಗತ್ತನ್ನು ಭಾರತವೇ ಸಾಂತ್ವನಗೊಳಿಸಬಲ್ಲದೆಂದು ದ್ರಷ್ಟಾರರು ಹೇಳುತ್ತಾರೆ. “ ಯೋಗ ಮತ್ತು ಅದರ ಉದ್ದೇಶ ” ಎಂಬ ಪುಸ್ತಕದಲ್ಲಿ— “ ಸದ್ಯದ ಮಾನವ ಕೋಟಿಯಲ್ಲಿ ಸತ್ಯಯುಗದ ಸಮೃದ್ಧಿ ಸಾಮರಸ್ಯಗಳು ಒಡಮೂಡಬೇಕಾದರೆ ಹೊರಮಗ್ಗಲಿನ ಯಾವ ಮಾರ್ಪಾಡುಗಳಿಂದಲೂ ಅದು ಸಾಧ್ಯವಿಲ್ಲ. ಒಳಗಿನ ಆಧ್ಯಾತ್ಮಿಕ ಸ್ಥಿತ್ಯಂತರದಿಂದಲೇ ಆಗುವದು. ಬಹು ಯುಗಗಳಿಂದಲೂ ಈಶ್ವರನು ಭರತಖಂಡವನ್ನು ಯೋಗಭೂಮಿಯಾಗಿ ಕಾಯ್ದಿಟ್ಟಿದ್ದಾನೆ. ಜಗತ್ ಕಲ್ಯಾಣದ ಕಾಲದಲ್ಲಿ

ಹಿಂದುಸ್ಥಾನದ ಯೋಗಿಗಳು ಬಹಿರಂಗದಲ್ಲಿ ಲೋಕಾಂತರಕ್ಕೆ ಬರುತ್ತಾರೆ.

"ಅರವಿಂದ ಮಂದಿರೇ"ದಲ್ಲಿ (೧೯೨೦) ಶ್ರೀ ಅರವಿಂದರು ಈ ಬಗೆಗೆ ವಿವರಿಸಿದ್ದು ಏನೆಂದರೆ— "ನಾಳೆ ಭರತಖಂಡವು ಎಂಥ ವಿಪುಲ ಕಾರ್ಯಭಾರವನ್ನು ವಹಿಸಬೇಕಾಗುವದೆಂಬದರದೇ ಸೂಚನಾಸ್ವರೂಪ ವಾಗಿ ಸಮಗ್ರ ಜಗತ್ತಿನಲ್ಲಿ ಒಂದು ಮಿಂಚು ಆರಂಭವಾಗಿದೆ. ಮುಂದಿನ ೩೦-೪೦ ವರ್ಷಗಳೊಳಗಾಗಿ ಜಗತ್ತಿನಲ್ಲಿ ವಿಪುಲವಾದ ಮಾರ್ಪಾಡಾಗು ವದು. ಎಲ್ಲವೂ ತಿರುವು ಮುರುವು ಆಗಿಬಿಡುವದು. ಆ ಬಳಿಕ ತಲೆಯೆತ್ತಿ ನಿಲ್ಲುವ ಜಗತ್ತಿನಲ್ಲಿ ಭಾರತ ಸಂಸ್ಕೃತಿಯೆ ಜಗತ್ತಿನ ಸಂಸ್ಕೃತಿಯಾಗುವದು. ಈ ಭವಿಷತ್ ಭಾರತದ ಕಾರ್ಯವು ಕೇವಲ ಭಾರತದ ಸಲುವಾಗಿ ಇರದೆ ಸಮಸ್ತ ಜಗತ್ತಿನ ಸಲುವಾಗಿ ಇದೆ."

ಅಂದ ಮೇಲೆ ಭಾರತವು ನಾಳಿನ ಜಗತ್ತಿನ ಕಲ್ಯಾಣಮಂಟಪ ವೆಂದಂತಾಗಲಿಲ್ಲವೇ? ಆಗ ಅದರ ದೀರ್ಘಕಾಲದ ನಿದ್ರೆಗೆ ಅರ್ಥವಾಗು ವದು. ಆಗ ಅದು ಸಾರ್ಥಕವೆನಿಸುವದು. ಆದುದರಿಂದ ಭಾರತವು ಎಚ್ಚರಿಯಬೇಕೆಂದು ಬರಿ ಭಾರತೀಯರೇ ಏಕೆ, ಅಖಿಲ ಜಗತ್ತೇ ಹಾರಯಿಸಬೇಕಾಗಿದೆ. "ಹಾಲು ನಿದ್ದೀ ತೊರೆಯೇ, ಜೇನು ನಿದ್ದೀ ತೊರೆಯೇ, ಸಕ್ಕರೆಯ ನಿದ್ದೆ ತೊರೆದೇಳs! ಏಳಮ್ಮಾ ಮಲಗಿರುವ ತಾಯಿ!!" ಎಂದು ಬೆಳಗಿನ ಹಕ್ಕಿಯೊಡನೆ ನಾವೂ ದನಿಗೂಡಿಸುವ.

# ೨ ಮಹಮ್ಮದೀಯರ ಆಗಮನ

"ಆತ್ಮ ಸಂಪಾದನೆಯಿಂದ ಭಾರತದ ಪ್ರಥಮ ಕಾಲವು ಬೆಳಗಿದರೆ, ಧರ್ಮ ಸಂಸ್ಥಾಪನೆಯಲ್ಲಿ ಅದರ ದ್ವಿತೀಯಕಾಲವೂ, ಶಾಸ್ತ್ರೀಯ ಸಿದ್ಧಾಂತಗಳಲ್ಲಿ—ಅದರ ವಿವರ ವಿವೇಚನೆ ಮಾಡುವುದರಲ್ಲಿ ಅದರ ತೃತೀಯ ಕಾಲವು ಕಳೆದಿದೆ" ಎಂದು ಹೇಳುತ್ತಾರೆ. ವೇದಗಳ ಕಾಲವೇ ಆಗಲಿ, ಉಪನಿಷತ್ತುಗಳ ಕಾಲವೇ ಆಗಲಿ ಅದು ಭಾರತೀಯರಿಗೆ ಆತ್ಮಸಂಪತ್ತಿಯನ್ನು ಗಳಿಸಿಕೊಟ್ಟ ಕಾಲವೆಂದು ಹೇಳಬಹುದು. ವಿಶ್ವದೊಳಗಿನ ವಿವಿಧಶಕ್ತಿಗಳ ಅದ್ಭುತತೆಯನ್ನು ಮನಗಂಡು ಅವುಗಳನ್ನು ಪೂಜಿಸಿದವನು, "ಅವನ್ನೆಲ್ಲ ಹುಟ್ಟಿಸಿದವನನ್ನು ಪೂಜಿಸುವಾ" ಎಂದು ಮುಂದಡಿಯಿಟ್ಟು ಆತ್ಮಸಂಶೋಧನೆಗೆ ತೊಡಗಿದನು. ಏಕತ್ವದಲ್ಲಿ ಅನೇಕತ್ವವನ್ನೂ, ಅನೇಕತ್ವದಲ್ಲಿ ಏಕತ್ವವನ್ನೂ ಸಾಕ್ಷಾತ್ಕರಿಸಿಕೊಂಡ ಆ ಮಹಾನುಭಾವರು ರಚಿಸಿದ ನಾಲ್ಕು ವರ್ಣಗಳು ಮುಂದೆ ಮುಂದೆ ಸಮಾಜ ಸೌಲಭ್ಯದ ಕರ್ತವ್ಯವನ್ನು ಮರೆತವು; ಎಲ್ಲೆಲ್ಲಿಯೂ ಯಾಜ್ಞಿಕರೂ ಯಜಮಾನರೂ ಕಂಗೊಳಿಸಹತ್ತಿದರು. ಯಜ್ಞದ ಹೆಸರಿನಲ್ಲಿ ಹಿಂಸೆಯು ಸರ್ವದಿಶೆಗಳನ್ನು ವ್ಯಾಪಿಸಿತು. ಅತಿಯಾದದ್ದೊಮ್ಮೆ ಅಲ್ಲಗಳೆಯುವದೇ ನಿಯಮ. ಆ ಕಾಲಕ್ಕೆ ಬೌದ್ಧ-ಜೈನಧರ್ಮಗಳು ಸುಧಾರಕ ಪಂಥಗಳೆನಿಸಿ ಸಂಸ್ಕಾರದೀಕ್ಷೆಗೆ ಅನುವಾಗಿ ನಿಂತವು. ಮೂರುಸಾವಿರ ವರುಷ ಅಖಂಡವಾಗಿ ಪ್ರವಹಿಸಿದ ಭರತಖಂಡವು ಎಂದು ವಿಶ್ರಾಂತಿಯನ್ನು ಹೊಂದಿತೋ ಅಂದಿನಿಂದಲೂ ಅದು ನಾಳಿನ ಜಗತ್ತಿನಲ್ಲಿ ತಾನು ಜರುಗಿಸಬೇಕಾದ ಕರ್ತವ್ಯವನ್ನು ವಹಿಸುವುದಕ್ಕೆ ತಕ್ಕುದಾದ ಶಕ್ತಿಸಾಮರ್ಥ್ಯಗಳನ್ನು ಗಳಿಸುತ್ತಲೇ ಬಂದಿತೆಂದು ತೋರುತ್ತದೆ. ಎಂದಿನ ಬೌದ್ಧಕಾಲ, ಈಗ ನಾವಿರುವ ಕಾಲ ಅಂದಿನಿಂದ ಈ ವರೆಗೂ ಭಾರತದ ಸಿದ್ಧತೆಯೋ ಎಂದರೆ ನಗೆಬರುವ ಮಾತೆಂದು ಅನ್ನಬಹುದು. ಮಹಾಕಾಲಪ್ರವಾಹದಲ್ಲಿ ಎರಡು-ಎರಡುವರೆ ಸಾವಿರ ವರುಷಗಳೆಂದರೆ ಬಹಳವಲ್ಲ; ಆಹುದು. ಆದರೆ ಜಪಾನವು ಒಂದೆರಡೇ ಶತಮಾನಗಳಲ್ಲಿ

ಕಳೆದುಂಬಿ ಜಗತ್ತಿನಲ್ಲಿ ಪ್ರಮುಖ ಸ್ಥಾನವನ್ನು ಗಳಿಸಿದೆಯಲ್ಲ! ಸಂಸ್ಕಾರ ಪೂರಿತವಾದ ಭಾರತಕ್ಕೇಕೆ ಮುಂದಗತಿ? ಆದರೆ— ಸಿದ್ಧರಸಿಕತೆಯಲ್ಲಿಯೂ ದೈನಂದಿನ ಸ್ವಭಾವವಲ್ಲಿಯೂ ಮುಂದುವರಿದ ಜಪಾನವೆಲ್ಲಿ? ವಿಚಾರ ಮಾಡದೆ ಹೆಜ್ಜೆ ಹಾಕದ ಹಾಗೂ ಅನಿಶ್ಚಯ ಸಾವಕಾಶಗಳ ಭಾರತವೆಲ್ಲಿ? ತಿಂದುದನ್ನು ಗಪಗಪ ಜೀರ್ಣಿಸಿಕೊಳ್ಳುವುದೂ, ಚುರುಕು ಚಪಲತೆಗಳಿಂದ ಬಂದಂತೆ ಬಣ್ಣ ತಿರುಹಿ ಹೊಂದಿಸಿಕೊಳ್ಳುವುದೂ ಜಪಾನಿನ ಸ್ವಭಾವ. “ತೀರಹೊರಮ್ಮೆಯನ್ನು ತಿದ್ದುವುದಿದ್ದರೂ, ಬೇರೆ ಅಚ್ಚಿಗಿಳಿಸುವುದಿದ್ದರೂ ಅಂತರ್ಯದ ಅಂತರಾಳದ ಆಳದಲ್ಲಿ ಎಣಿಕೆಹಾಕಿ, ಧ್ಯಾನವು ತೀರಿ, ಸಮಾಧಿಯೇಳಿದು, ಎರಕದ ಮೂಸೆ ಸಿದ್ಧವಾಗುವ ವರೆಗೂ ಹೊಸಹಾದಿಯಲ್ಲಿ ಹಗುರುಹೆಜ್ಜೆ ಹಾಕತಕ್ಕುದು ಭಾರತದ ರಕ್ತಗುಣ.” ಅಂದಮೇಲೆ ಭಾರತದ ಸಂಸ್ಕಾರಕ್ಕೆ ಹೆಚ್ಚುಕಾಲ ಬೇಕಾಗಿದ್ದರೆ ಅದೇನು ದೊಡ್ಡಮಾತಲ್ಲ. ಬೌದ್ಧಧರ್ಮದ ಹೊಸ ಹೊನಲಿನಿಂದ ಅಹಿಂಸೆಯ ಅಮೌಲ್ಯವಾದ ಆಸ್ತಿಯು ಹಿಂದು ಧರ್ಮಕ್ಕಾಯಿತೆಂದೂ, ಮೂರ್ತಿಸ್ಥಾಪನೆ,ಮಂದಿರ ನಿರ್ಮಾಣಗಳು ಹಿಂದು ಧರ್ಮದಲ್ಲಿ ಸೇರಿಕೊಂಡವೆಂದೂ ಇತಿಹಾಸಕಾರರ ಅಭಿಪ್ರಾಯವಿದೆ. “ಹಿಂದು ಧರ್ಮವು ಸರ್ವಧರ್ಮಸಮ್ಮೇಳನ ಸ್ಥಾನವಾಗಿದೆ. ಹಿಂದು ಧರ್ಮವೊಂದೇ ವಿಶಾಲವ್ಯೂಹಗಳ ಜಂಜಾಲವಾಗಿದೆ. ಅದೊಂದು ಧರ್ಮವೆನ್ನುವದಕ್ಕಿಂತ ಪಾರಮಾರ್ಥಿಕ ವಿಚಾರ, ಸಾಧನೆ, ಆಕಾಂಕ್ಷೆಗಳನ್ನೂ ವಿಪುಲವೈವಿಧ್ಯದಲ್ಲಿ ಸಹ ಸೂಕ್ಷ್ಮವಾಗಿ ಏಕೀಕರಿಸುವ ಘನಮತವಾಗಿದೆ” ಯೆಂದು ಶ್ರೀ ಅರವಿಂದರು ಹೇಳುತ್ತಾರೆ. ಅದು ಇಂದಿಗೆ ಹಾಗಾಗಬೇಕಾದರೆ, ಅದು ಕಾಲಕಾಲಕ್ಕೆ ಅನೇಕ ಮಾರ್ಪಾಡುಗಳನ್ನು ಹೊಂದುತ್ತ ಬಂದಿದೆ. ಹಿಂದುಸ್ಥಾನದಲ್ಲಿ ಜನ್ಮವೆತ್ತಿ ಹಿಂದುಧರ್ಮದ ಗಾಳಿ-ಬೆಳಕುಗಳಲ್ಲಿ ಬೆಳೆದುನಿಂತ ಬೌದ್ಧಧರ್ಮವೊಂದು ಕಾಣಿಕೆಯನ್ನು ಭಾರತಕ್ಕೆ ಕೊಡದೆ ಹೋಗಿಲ್ಲ. ಆ ಕಾಣಿಕೆ ಯಾವುದೆಂಬುದನ್ನು ಮೇಲೆ ಸೂಚಿಸಿದೆ. ಬೌದ್ಧಧರ್ಮದ ಪ್ರಭಾವವನ್ನು ಅಣಕಿಸುವ ನೆವದಿಂದಲೇ ಉದಯವಾದ ಶ್ರೀ ಶಂಕರಾಚಾರ್ಯರ ಅದ್ವೈತರತ್ನವು ಭಾರತೀಯರ ಮಹತ್ತರವಾದ ಆಸ್ತಿಯಾಗಿದೆ. ಇಹಜೀವಿತಕ್ಕೇನಾದರೂ ನಿಜವಾದ ಬೆಲೆಯಿರುವುದೋ ಎಂದು ಸಂಶಯಾಕುಲತೆಯನ್ನುಂಟುಮಾಡಿದರೂ

ಬೌದ್ಧಧರ್ಮವು ಅದನ್ನೊಂದು ಬುದ್ಧಿವಾದವೆಂದೇ ಹೊಡಿತಂತೆ. ಶ್ರೀ ಅರವಿಂದರ ಅಭಿಪ್ರಾಯದಂತೆ— ಆ ಮತದ ಚೈತನ್ಯದಿಂದ, ನೀತಿ ಶಾಸ್ತ್ರದಿಂದ, ಸಾಧನ ಪದ್ಧತಿಯಿಂದ ಮಾನವಜೀವನಕ್ಕೆ ಹೊಸ ತ್ರಾಣ, ಹೊಸ ಅರ್ಥ, ಸುಕುಮಾರವಾದ ಆದರ್ಶವಾದಿತ್ವಗಳು ಬಂದು, ಪ್ರಪಂಚ ನಿರೂಪಣಾ ಕಲೆಗಳಿಗೂ, ವ್ಯವಹಾರ-ರಾಜ್ಯಕಾರ್ಯಗಳಿಗೂ ನವಜನ್ಮವೇ ಬಂದಿತು.

ಹಿಂದು ಧರ್ಮದಲ್ಲಿ ದ್ವೈತ, ಅದ್ವೈತ, ವಿಶಿಷ್ಟಾದ್ವೈತ, ಶಕ್ತಿ-ವಿಶಿಷ್ಟಾದ್ವೈತ ಮೊದಲಾದ ಭಿನ್ನಭಿನ್ನ ಮತಗಳೂ ಪಂಥಗಳೂ ವೈವಿಧ್ಯವನ್ನು ತೋರಿಸುವವಲ್ಲದೆ, ಪರಸ್ಪರ ವಿರೋಧವನ್ನೂ ತೋರಿಸುತ್ತವೆ. ಆದರೂ ಅವೆಲ್ಲ ವೇದಾಗಮಗಳ ಸಂತಾನವೆಂದು ಹೇಳಿಕೊಳ್ಳುತ್ತವೆ. ಶಿವ-ವಿಷ್ಣುಗಳು ಭಾರತೀಯರ ಆದರ್ಶ ಪೂಜ್ಯದೇವತೆಗಳೆನಿಸಿದರೂ ಅವರಲ್ಲಿ ಪರಸ್ಪರ ವಿರೋಧವು ಕಂಡುಬರುತ್ತದೆ. ಕಾಮಪಿತನೊಬ್ಬನಾದರೆ ಕಾಮಹತನೊಬ್ಬನು; ಶಿವನು ಗಂಗೆಯನ್ನು ಮುಡಿಯಲ್ಲಿ ಧರಿಸಿದರೆ, ವಿಷ್ಣುವು ಅಡಿಯಲ್ಲಿ ಧರಿಸಿದ್ದಾನೆ. ರಕ್ಷಕನೊಬ್ಬನಾದರೆ ಸಂಹಾರಕನೊಬ್ಬನು. ಇದರಂತೆ ಲಕ್ಷ್ಮಿ-ಸರಸ್ವತಿಯರು; ಇವರ ವಿರೋಧಕ ಶಕ್ತಿಯನ್ನು ಎಲ್ಲರೂ ಬಲ್ಲರು. ಇಲಿಯನೇರಿದವನೊಬ್ಬ ದೇವನಾದರೆ ಹುಲಿಯನೇರಿದವನೊಬ್ಬನು. ನವಿಲುವಾಹನನಿಗೂ ಸರ್ಪಧಾರಿಗೂ ಹೇಗೆ ಕೂಡಿಬರುವುದೋ ತಿಳಿಯದು. ತನ್ನ ಮತವು ಶ್ರೇಷ್ಠವೆನ್ನಲಾರದವನು ಆ ಮತದಲ್ಲಿ ಶ್ರದ್ಧೆಯುಳ್ಳವನಾಗಲಾರನು. ತನ್ನದು ಶ್ರೇಷ್ಠವೆಂದು ಹೇಳಿಕೊಳ್ಳುವಾಗ ಇನ್ನೊಂದರೊಡನೆ ತುಲನೆ ಮಾಡಬೇಕಾಗುವದು: ತುಲನೆಗೆ ನಿಂತಾಗ ಶ್ರೇಷ್ಠ-ಕನಿಷ್ಠವೆಂದೂ, ಹಿರಿದು-ಕಿರಿದೆಂದೂ ಪ್ರತಿಪಾದಿಸುವುದು ಸ್ವಾಭಾವಿಕ. ಕನಿಷ್ಠವೆಂದೂ ಕಿರಿದೆಂದೂ ಇನ್ನೊಂದು ಮತವು ಅನಿಸಿಕೊಳ್ಳಲಾರದು. ಅಲ್ಲಿ ಕಲಹದ ಬೀಜ. ಬೌದ್ಧ ಧರ್ಮದಿಂದ ಹಿಂದು ಧರ್ಮದಲ್ಲಿ ಸೇರಿದ ಭವ್ಯಮಂದಿರಗಳೂ, ದಿವ್ಯ ಮೂರ್ತಿಗಳೂ ಅಸ್ತಿತ್ವಕ್ಕೆ ಬಂದವು. ಯಜ್ಞಯಾಗಾದಿಗಳು ಅತಿ ಶೇಕಕ್ಕೆ ಹೋಗಿ ಬುದ್ಧನ ಅವತಾರಕ್ಕೆ ಕಾರಣವಾಗಿರಬಹುದಾದಂತೆ ಅಸಂಖ್ಯಮೂರ್ತಿಗಳು ಮುಹಮ್ಮದೀಯರ ಆಗಮನಕ್ಕೆ ಕಾರಣವಾದುವೆನ್ನುವಂತಿದೆ.

ಇಸ್ಲಾಮ ಧರ್ಮವು ಹೇಳಿಕೇಳಿ ಮೂರ್ತಿಪೂಜೆಯ ಪ್ರತಿಕಾರ ಸ್ವರೂಪವಾಗಿ ಜನ್ಮ ತಾಳಿದ್ದು. ಮುಹಮ್ಮದ ಪೈಗಂಬರರ ಪೂರ್ವಜರೆಲ್ಲ ಮೂರ್ತಿಪೂಜಕರು; ಅಷ್ಟೇ ಅಲ್ಲ ೩೬೫ ಮೂರ್ತಿಗಳು ಪ್ರಚಾರದಲ್ಲಿದ್ದ ಕಾಅಬಾದ ಪೂಜಾರಿಗಳು. ಅಂಥವರ ಮೂರ್ತಿಪೂಜೆಯನ್ನು ಇಸ್ಲಾಮವು ವಿರೋಧಿಸಿದೆ. ದ್ರವ್ಯದಾಸೆಯು ಗಿಜನಿ ಮುಹಮ್ಮದನನ್ನು ಭಾರತಕ್ಕೆ ಸೆಳೆದು ತಂದಿತೆಂದು ಹೇಳುತ್ತಾರೆ. ಅವನು, ತಾನು ಮೂರ್ತಿಗಳನ್ನು ಮಾಡುವವನಲ್ಲ ಒಡೆಯುವವನೆಂಬ ಬಿರುದು ತೊಟ್ಟವನು. ಅಂಥವರಲ್ಲಿ ದ್ರವ್ಯವು ಮೂರ್ತಿಗಳಲ್ಲೇ ತುಂಬಿಕೊಂಡಿರಬೇಕೇ? ಮೂರ್ತಿಗಳೆಂದರೆ ಮುಸಲ್ಮಾನರಿಗೆ ಮೊದಲೇ ಆಗದು. ಅದರಲ್ಲಿ ದುರಾಶೆಗೀಡು ಮಾಡುವದ್ರವ್ಯ ಬೇರೆ ಮೂರ್ತಿಯಲ್ಲಿದ್ದರೆ ಕೇಳಬೇಕೆ? ಅವನ್ನು ಖಂಡಿಸದೆ, ತುಂಡರಿಸದೆ ಅನ್ಯಮಾರ್ಗವೇ ಉಳಿಯಲಿಲ್ಲ. ವಿವಿಧ ಮತಾಂತರಗಳ ಕಾರಣದಿಂದಲೋ, ವೈಯಕ್ತಿಕ ದೋಷದಿಂದಲೋ ಆಗಿದ್ದ ಅರಸರಲ್ಲಿ ಪರಸ್ಪರ ಕಲಹ-ಕೋಲಾಹಲವು ಮಿತಿಮೀರಿತ್ತು. ರಜಪೂತರಂಥ ರಾಜಪುತ್ರರೂ ಮುಸಲ್ಮಾನರ ಇದಿರಿಗೆ ಸೋತು ಅಡವಿ ಪಾಲಾದರು. ಮುಹಮ್ಮದೀಯರ ಸಂಸ್ಕೃತಿಯು ಭಾರತೀಯರಿಗೆ ಹೊಸದರಲ್ಲಿ ತೀರ ಭಿನ್ನವಾಗಿ ತೋರಿತು; ಅವರು ಭಾರತೀಯರಿಗೆ ಭಯಂಕರವಾಗಿ ಕಾಣಿಸಿದರು. ಮುಖದ ಮೇಲೆ ಬಿಟ್ಟ ಕೂದಲು, ಕಾಲು ಸೇರಿಸುವ ಇಜಾರ, ಪಶ್ಚಿಮಕ್ಕೆ ನಿಂತು ಪ್ರಾರ್ಥನೆ ಮಾಡುವ ರೀತಿ, ಬಲದಿಂದೆಡಕ್ಕೆ ಬರೆಯುವ ವಿಚಿತ್ರ ಬರಹ, ಲೇಖನಕ್ಕೂ ಉಚ್ಚಾರಕ್ಕೂ ತಾಳಮೇಳವಿಲ್ಲದ ಪದ್ಧತಿ, ಬೆಳ್ಳಿಯ ತೊಡಿಗೆಗಳು, ಇವೆಲ್ಲವೂ ಭಾರತೀಯರಿಗೆ ಪ್ರಥಮದರ್ಶನದಲ್ಲಿ ವಿಚಿತ್ರವಾಗಿ ತೋರಿರಬಹುದಾಗಿದೆ. ಅದರಂತೆ ಮುಹಮ್ಮದೀಯರಿಗೂ ಭಾರತೀಯರ ರೀತಿ-ನಡುವಳಿಗಳು ತಿರುವು-ಮುರುವಾಗಿ ತೋರುವದು ಸಹಜವೇ ಆಗಿದೆ. ಪರಸ್ಪರರು ಅಪರಿಚಿತರು. ಅಂತಹದರಲ್ಲಿ ಕಲಹವಿಲ್ಲವಾದರೆ ಸಾಶಂಕವೃತ್ತಿಯಾದರೂ ಸಾಕಷ್ಟು ಇರಲೇಬೇಕು. ಸಾಶಂಕವೃತ್ತಿಯು ಕಲಹದ ಬೀಜ. ಕಲಹವು ಕುಲಕ್ಕೆ ಕುಠಾರವು. ಕೈಯೊಳಗಿನ ಒನಕೆಯಂಥ ಟೊಣ್ಣೆಯುಳ್ಳವರು ಮುಸಲ್ಮಾನರೆಂದು

ಕರೆಯಲ್ಪಟ್ಟರು; ಯವನರೆಂದು ದೂರಲ್ಪಟ್ಟರು. ಬಂದವರು ಭಾರತೀಯರಿಗೆ ಕಾಫರರೆಂದು ಹೆಸರಿಟ್ಟರು.

ಭಾರತಕ್ಕೆ ಬೌದ್ಧ ಧರ್ಮವು ಆಯುರ್ವೇದ ಚಿಕಿತ್ಸೆಯಂತೆ ಸೌಮ್ಯವಾಗಿ ಗುಣಕೊಟ್ಟು ಸತ್ಪರಿಣಾಮವನ್ನುಂಟುಮಾಡಿದರೂ, ಅಳತೆಗೆಟ್ಟ ಅಪಥ್ಯದ ಮೂಲಕ ಭಾರತದ ಬೇನೆಯು ಹಣಿಯದ ಕುತ್ತು ಆಯಿತು. ಆದರೆ ವಿಧಾತನು ಬರೆದ ಭಾರತದ ಆಯುಷ್ಯರೇಖೆಯು ಗಟ್ಟಿಯಾಗಿತ್ತು. ಆದುದರಿಂದ ಸಾಯುವ ಅಂಜಿಕೆ ಇಲ್ಲ. ಆದರೂ ನೆವಮಾತ್ರಕ್ಕೆ ಒಬ್ಬ ವೈದ್ಯನು ಬೇಡವೇ? ಈ ಸಲ ಔಷಧಿ ಚಿಕಿತ್ಸೆಗಿಂತ ಶಸ್ತ್ರಚಿಕಿತ್ಸೆಯ ಅವಶ್ಯಕತೆಯು ಕಂಡು ಬಂದಿತು. ಅದು ಆಗಿಯೂ ಬಿಟ್ಟಿತು. ಜಯಪಾಲನೊಡನೆ ಮಹಮ್ಮದಿಯರ ಯುದ್ಧಗಳಾದವು. ಮಹಮೂದನ ಹದಿನೇಳು ದಾಳಿಗಳಾದವು; ಠಾಣೇಶ್ವರ ಕಾಳಗಗಳಾದವು; ದೇವಗಿರಿಯ ದಂಡಯಾತ್ರೆ, ದ್ವಾರಸಮುದ್ರ-ಹೊಯ್ಸಳರ ಸರ್ವನಾಶ ಇವೆಲ್ಲವುಗಳ ಜೊತೆಗೆ ಒರಂಗಲ್ಲಿನ ಕಾಕತೀಯರು ಕಾಗೆಯ ಪಾಲಾದರು; ರಜಪೂತರು ನಾಮಶೇಷವಾದರು; ಅಂತಃಕಲಹಗಳು ಒಮ್ಮೆಲೆ ಭುಗ್ಗೆಂದು ಉರಿದೆದ್ದವು. ಸತ್ವಶಾಲಿಗಳಾದ ದೇವಮೂರ್ತಿಗಳು ಭಿನ್ನವಾದವು; ಮುಗಿಲವರೆಗೆ ನಿಂತ ದೇವಾಲಯಗಳು ನೆಲಕ್ಕುರುಳಿದವು. ಭಾರತಿಯು ಗುಲಾಮನಾದ ಕುತುಬುದ್ದೀನನ ಸಾರ್ವಭೌಮತ್ವವನ್ನು ಒಪ್ಪಿಕೊಂಡಳು; ಕುತುಬಮಿನಾರವು ತನ್ನ ವಿಜಯ ದುಂದುಭಿಯನ್ನೂದಿತು ಇಷ್ಟು ಶಸ್ತ್ರಚಿಕಿತ್ಸೆಯಾದ ಬಹಳ ಹೊತ್ತಿನ ಮೇಲೆ ಭಾರತೀಯರ 'ಕ್ಲೋರೋಫಾರ್ಮಿ'ನ ಅಮಲು ಇಳಿದು 'ಹಾ' ಎಂಬ ನರಳಿನ ದನಿಯೊಮ್ಮೆ ಹೊರಹೊಮ್ಮಿತು. ಆಗ ಒಂದೊಂದೇ ಅಂಗದಲ್ಲಿ ವೇದನೆಯು ಕಂಡು ಬರತೊಡಗಿತು. ಭಾರತವು ಎಚ್ಚರಾದಂತೆ ಆರೋಗ್ಯಮಾರ್ಗವನ್ನು ಅವಲಂಬಿಸತೊಡಗಿತು. ಪಥ್ಯಾಹಾರವನ್ನು ಸ್ವೀಕರಿಸಹತ್ತಿತು; ಮೈಯಲ್ಲಿ ತ್ರಾಣ ಬಂದಂತೆ ಸೌಮ್ಯ ವ್ಯಾಯಾಮವನ್ನು ಕೈಕೊಂಡಿತು. "ಏಳು ಸಾಯಣ ಕಟ್ಟು ಗ್ರಂಥವನೇಳು ಸಂಪಾಕ್ಷೇತ್ರಕೆ" ಎಂದು ದ್ವಿಜೋತ್ತಮರು ವೇದ ಶಾಸ್ತ್ರಗಳನ್ನು ಕಟ್ಟಿಟ್ಟು, ಚಿಕಿತ್ಸಕದಳವನ್ನು ಏರ್ಪಡಿಸಲನುವಾದರು; ಅವರು ತಮ್ಮ ತಪಃಸಾಮರ್ಥ್ಯದಿಂದ ಭಾರತದ ರೋಗ ಪರಿಹಾರಕ ಮಂತ್ರವನ್ನು

ಪಠಿಸಿದರು. ಶೈವರೂ ವೈಷ್ಣವರೂ ತಂತಮ್ಮ ಒಡೆದುಳಿದ ಅರ್ಧಮರ್ಧ ಮೂರ್ತಿಯ ತುಣುಕುಗಳನ್ನು ಹೊಂದಿಸಿಟ್ಟು "ಹರಿಹರ"ನೆಂಬ ಒಕ್ಕೊರಲಿನಿಂದ ಕೂಗಿದರು. ಚಿಕಿತ್ಸೆಗಾಗಿ ಬಂದ ಶಸ್ತ್ರವೈದ್ಯನ ಅಸವಸಿತನದಿಂದ ಆತನ ಶಸ್ತ್ರವು ಸಂಹಾರಕ್ಕೆ ತೊಡಗಿತು. ಅದನ್ನು ರೋಗಿಯೇ ಬಲಪೂರ್ವಕವಾಗಿ ಪ್ರತಿಕರಿಸಬೇಕಾಯಿತು. ಅನೈಕ್ಯದಿಂದ ಛಿನ್ನಭಿನ್ನವಾದ ಭಾರತದ ಅಂಗಾಂಗಗಳು ಮುಹಮ್ಮದಿಯರ ಬಿರುಗಾಳಿಗೆ ತಾವಾಗಿಯೇ ಒತ್ತಟ್ಟಿಗೆ ಕೂಡಿಕೊಂಡವು. ಪ್ರಳಯದಂತಿದ್ದ ಬಿರುಗಾಳಿಯು ಅದಕ್ಕೆ ಹೊಸ ಜೀವಕಳೆಯನ್ನು ತರದಿದ್ದರೂ, ಇದ್ದ ಜೀವಪ್ರಳಯದೊಡನೆ ಜೀವಕಳೆಯೂ ಭಾರತಕ್ಕೆ ತಗುಲಿತು. ಆದರೇನು? ಕತ್ತಿನಿಂದ ಪಾರಾಗುವುದು ಬಲು ಬಿಗಿಯಷ್ಟೇ?

ಮುಹಮ್ಮದಿಯರೇ ಭಾರತ ಸಾಮ್ರಾಟರಾದರೂ ಹಿಂದುಗಳೂ ಸಾಮ್ರಾಜ್ಯವನ್ನು ಕಟ್ಟದೆ ಇರಲಿಲ್ಲ. ಪರಸ್ಪರರು ಪರಿಚಿತರಾದರು. ಪರಿಚಯದಿಂದ ಭಾಷಣವೂ ಭಾಷಣದಿಂದ ಸಹವಾಸವೂ ಸಹಜವಷ್ಟೇ? ಆದರೆ ಸಹವಾಸದಿಂದ ಸೌಖ್ಯವೆನ್ನುವುದು ಇನ್ನೂ ದೂರದ ಮಾತಾಗಿತ್ತು. ಪರಸ್ಪರರು ಬಲದಲ್ಲಿ ಸಮಾನರಾದಾಗ ಮಾತ್ರ ತೂಗಾಟವು ಕಡಿಮೆಯಾಗುವುದು ಸ್ವಾಭಾವಿಕ. ಸಮಾನಶೀಲತೆಯು ಮೈತ್ರಿಗೆ ಕಾರಣವಾಗುತ್ತದೆಂದು ಹೇಳುತ್ತಾರೆ. ಆಗ ಪರಸ್ಪರರಲ್ಲಿಯ ಜಗಳದ ಭರತಿಯು ಅದೆಷ್ಟೋ ಕಡಿಮೆಯಾಗಿ ಉತ್ಪಾದಕ ಕಾರ್ಯಗಳಿಗೆ ಆರಂಭವಾಗುವುದು ಕ್ರಮಪ್ರಾಪ್ತ. ಅದರಂತೆ ಆಗಿಯೂ ಬಿಟ್ಟಿತು. ಕಲಾಕೌಶಲ್ಯಗಳಿಗೆ ಈಗ ಕಳೆಬರತೊಡಗಿತು. ಭಾರತೀಯರ ಪ್ರಾಚೀನ ಕಲಾಕೃತಿಗಳ ಮೇಲೆ ಮುಹಮ್ಮದಿಯರ ರಸಿಕತನದ ಪ್ರಶಾಂತ ಬೆಳಕು ಬಿದ್ದಿತ್ತು. ಜಕಣಾಚಾರ್ಯರ ಪದ್ಧತಿಯು ವ್ಯೂಹವಾದ ಭುವನೇಶ್ವರಿಗಳುಳ್ಳ ದೇವಮಂದಿರಗಳೊಡನೆ ಅದ್ಭುತ ರಮ್ಯವೂ ಭವ್ಯವೂ ಆದ ಕಟ್ಟಡಗಳು ಕಂಗೊಳಿಸಿದವು. ಬೇಲೂರಿನ ಚೆನ್ನಕೇಶವ ದೇವಾಲಯವು ಚೆಲುವಿನ ಪುತ್ಥಳಿಯಾದರೆ, ವಿಜಾಪುರದ ಗೋಳಗುಮ್ಮಟವು ಭವ್ಯಾಕಾರದ ಸಮಾಧಿ. ಬದಾಮಿಯ ಮೇಣಬಸ್ತಿಗಳೂ, ವೇರೂಳ ಕೈಲಾಸ ದೇವಾಲಯವೂ ರಮ್ಯತೆಯ ಕುರುಹುಗಳಾಗಿದ್ದರೆ, ತಾಜಮಹಲು ರಮಣೀಯತೆಗೆ ನಿದರ್ಶನ. ಗೊಮ್ಮಟೇಶ್ವರನ ಭವ್ಯಪ್ರಶಾಂತ ಮೂರ್ತಿಯು

ದಕ್ಷಿಣದಲ್ಲಾದರೆ, ಕುತುಬಮಿನಾರವು ಅಜಾನುಬಾಹುವಾಗಿ ಉತ್ತರದಲ್ಲಿ ನಿಂತಿದೆ. ಶಿಲ್ಪಕಲೆಯಂತೆ ಚಿತ್ರಕಲೆಗೂ ಮೊಗಲಪದ್ಧತಿಯ ಮುದ್ರೆ ಬಿದ್ದಿದೆ. ತಿಳಿಯಾದ ನೀರಿಗೂ ತಿಳಿಯಾದ ಮಲಮಲ್ಲಿನಂಥ ಅರಿವೆಯು ಪ್ರಸಿದ್ಧವಾದುದು ಅದೇ ಕಾಲದಲ್ಲಿಯೇ. ಹೀಗೆ ಕಲಾವಂತರು ಏಕಾಗ್ರತೆಯಿಂದ ರಚಿಸಿದ ಸುಂದರವಾದ ವಸ್ತುಗಳನ್ನು ಉಪಯೋಗಿಸುವ ಭೋಗಿಗಳೂ, ಧಾರಾಳವಾಗಿ ಬೆಲೆಕೊಟ್ಟು ಕೊಂಡುಕೊಳ್ಳುವ ಉದಾರಿಗಳೂ ಭಾರತದಲ್ಲಿ ತಲೆದೋರಿದರು. ಗಿಜನೀ ಘೋರಿ ಮುಹಮ್ಮದರಂತೆ ಸುಲಿಗೆಯೊಡನೆ ತಮ್ಮ ದೇಶಕ್ಕೆ ಮರಳಿ ಹೋಗದೆ ಭಾರತೀಯರಾಗಿಯೇ ಉಳಿದ ಮುಸಲ್ಮಾನ ಬಾದಶಹರು ರಸಿಕರಾಗಿದ್ದುದರಿಂದ ಕಲಾಕೌಶಲ್ಯಗಳಿಗೆ ಅವರಿಂದ ವಿಶೇಷವಾದ ಪ್ರೋತ್ಸಾಹ ಸಿಕ್ಕಿತು. ಹಿಂದುಸ್ತಾನದ ದ್ರವ್ಯವು ಇದೇ ದೇಶದಲ್ಲಿಯೇ ಉಳಿದು ಒತ್ತಟ್ಟಿಗೆ ನಿಲ್ಲದ ಮೋಡ ಮಳೆಗಳ ನ್ಯಾಯದಂತೆ ಮೇಲಿನಿಂದ ಕೆಳಗೂ ಕೆಳಗಿನಿಂದ ಮೇಲೂ ಸಾಗುತ್ತ ಬಂದುದರಿಂದ ಬಡತನ ಶ್ರೀಮಂತಿಕೆಗಳ ಸ್ಪಷ್ಟ ಭೇದಭಾವವು ಮೊಳೆದೋರದೆ ಇದ್ದಿತು.

ಹಿಂದು-ಮುಸ್ಲಿಮರು ಏನೋ ಕಾಲಕೂಡಿಕೊಂಡು ಒತ್ತಟ್ಟಿಗೆ ನೆಲೆಸಿದ್ದರಿಂದ ಪರಸ್ಪರರು ಸಮೀಪದವರಾಗಿ ಸಂಬಂಧಿಕರೆನಿಸಹತ್ತಿದ್ದರು. ಮಿತ್ರರಾಗಿ ಕೂಡಿಕೊಂಡವರಲ್ಲಿ ಒಮ್ಮೆ ಒಡಕುಂಟಾಗುವದೂ, ಶತ್ರುಗಳಾಗಿ ಸಂಬಂಧಪಟ್ಟವರಲ್ಲಿ ಒಮ್ಮೆ ಐಕ್ಯವುಂಟಾಗುವದೂ ಸೃಷ್ಟಿಯ ಧರ್ಮ. ಮಿತ್ರತ್ವವು ಪ್ರೇಮದ ಕುರುಹೆಂದು ನಾವೆಲ್ಲರೂ ಬಲ್ಲೆವು. ಆದರೆ ಶತ್ರುತ್ವವೂ ಪ್ರೇಮದ ಕುರುಹೇ ಎಂದು ತಿಳಿಯುವುದಕ್ಕೆ ಬಹಳ ಕಾಲ ಬೇಕು. ಉಭಯತರಲ್ಲಿ ಸೇರಿಕೆಯಾಗುವ ಗುಣಗಳಿಂದ ಮಿತ್ರತ್ವವೂ, ಸೇರಿಕೆಯಾಗದ ಗುಣಗಳಿಂದ ಶತ್ರುತ್ವವೂ ಉಂಟಾಗುವವಷ್ಟೇ; ತನಗೆ ಸೇರಿಕೆಯಾಗದ ಗುಣಗಳು ಇನ್ನೊಬ್ಬನಲ್ಲಿರಬಾರದೆಂದು ಕದನ. ಆ ಗುಣಗಳು ಅಲ್ಲಿಂದ ತೊಲಗಬೇಕು; ಇಲ್ಲವೆ ಅವು ಸ್ವಾಭಾವಿಕವೆನ್ನುವ ಸಹಾನುಭೂತಿ ತಲೆದೋರಬೇಕು. ಇಷ್ಟಾದರೆ ಕಲಹಸಮಾಪ್ತಿ. ನಿಜವಾಗಿ ಕಲಹಸಮಾಪ್ತಿ ಆಗಬಾರದು. ಹಾಗೆ ಆದುದು ಮೃತಲಕ್ಷಣವೇ ಸರಿ. ಅದು ಮಿತ್ರತ್ವಕ್ಕಷ್ಟೇ ಕೊನೆಗಾಲವಲ್ಲ; ಜೀವಿತಕ್ಕೂ ಕೊನೆಗಾಲ. ಸೂಕ್ಷ್ಮವಾದ ಐಕ್ಯತೆಗೆ ಹಾದಿಮಾಡಿಕೊಡುತ್ತಿರುತ್ತವೆ. ಹಿಂದು-ಮುಸ್ಲಿಮರು ಪರಸ್ಪರರಲ್ಲಿಯ ಅನುಕರಣೀಯ

ಸಂಗತಿಗಳನ್ನೂ ಗುಣಗಳನ್ನೂ ಗ್ರಹಿಸಿಕೊಂಡು ತಮ್ಮವನ್ನಾಗಿ ಮಾಡಿಕೊಂಡರು. "ಊರಿಂಗೆ ದಾರಿಯನು ಯಾರುತೋರಿದರೇನೆಂ"ದು ಹಾಡುತ್ತ ಕಬೀರನು ಮಹಮ್ಮದೀಯನಾದರೂ ರಮಾನಂದರ ಶಿಷ್ಯನಾದನು. "ಜಾತಿಹೀನನ ಮನೆಯ ಜ್ಯೋತಿ ತಾ ಹೀನವೇ ?" ಎಂದು ರಮಾನಂದರೂ ಅವನನ್ನು ಸ್ವೀಕರಿಸಿದರು. ಕಬೀರನ ಜನ್ಮ ಮಹಮ್ಮದೀಯರಲ್ಲಿ; ಜೀವನ ಹಿಂದುವಿನಂತೆ. ಆ ಮಹಾನುಭಾವಿಯ ಶವಸಂಸ್ಕಾರವು ಉಭಯತರನ್ನೂ ದಿಗಿಲುಗೊಳಿಸಿತು. ಹಿಂದು ಮುಸ್ಲಿಮರು ಭಿನ್ನವಾದ ಎರಡು ಲೋಹಗಳಂತಿದ್ದರೂ ಪರಸ್ಪರ ಬೆಸುಗೆಯಾಗಬಲ್ಲದೆಂದು ಸಾರಿ, ಮಡಿದು, ಮಾದರಿಯಾಗಿ ಜೀವಿಸಿದವನು ಅಕಬರನು. ಆತನು ತತ್ವಕ್ಕಾಗಿಯೇ ಇರಲಿ, ರಾಜನೀತಿಗಾಗಿಯೇ ಇರಲಿ, ಹಿಂದುಗಳೊಡನೆ ಹಾರ್ದಿಕವಾಗಿ ಕೂಡುವುದರ ಅವಶ್ಯಕತೆಯನ್ನು ಅರಿತಿದ್ದನು. ಅಂತೆಯೇ ಆತನು ರಜಪೂತರೊಡನೆ ಶರೀರಸಂಬಂಧವನ್ನು ಮಾಡಿದ್ದನು; ಹಿಂದು ಪೋಷಾಕು ಧರಿಸುತ್ತಿದ್ದನು. ಗಡ್ಡ ಬೋಳಿಸಿದ ಅಕಬರನ ಚಿತ್ರಗಳೇ ಪ್ರಸಾರವಲ್ಲಿವೆ. "ದಾಡಿ ಇಲ್ಲದ ಸಾಬರಯ್ಯನ ನಂಬಬೇಡೆಂ"ದು ಕೇಳಬೇಕೇ ? ಆತನು ಏಕೇಶ್ವರೀ ಪಂಥವನ್ನು ಸ್ಥಾಪಿಸಿದನು. ಉಪನಿಷತ್ತು ಮೊದಲಾದವುಗಳನ್ನು ಪಾರಸೀ ಭಾಷೆಗೆ ಪರಿವರ್ತಿಸಲು ಪಂಡಿತರಿಗೆ ಪ್ರೋತ್ಸಾಹವನ್ನಿತ್ತನು. ಇವೆರಡೂ ಭಿನ್ನಸಂಸ್ಕೃತಿಗಳಾದರೂ ಕೂಡಿಕೊಳ್ಳುವದು ಅವಶ್ಯವೆಂದೂ, ಶಕ್ಯವೆಂದೂ ಇನ್ನೂರು ವರುಷಗಳ ಹಿಂದೆಯೇ ಜನರಿಗೆ ಅನಿಸಿತ್ತು. ಆದರೆ ಅವು ಬೆರೆತು ಒಂದಾಗಲಾರವಾದರೂ ಇಬ್ಬರೂ ಸಮಾನಶೀಲರಾದರೆ, ಸಹಾನುಭೂತಿಯಿಂದ ಹೊಂದಿಕೊಂಡಿರಲು ಯಾವ ಅಭ್ಯಂತರವೂ ಇಲ್ಲ. ಸೂಕ್ಷ್ಮವಾಗಿ ಕೂಡುವವರೆಗೆ ಸೂಕ್ಷ್ಮತಂಟೆಗಳು ಇರತಕ್ಕವೇ ! ಅಕಬರನಂಥವರು ನೂರಾರು ಜನರು ಹುಟ್ಟಿ ಬಂದರೂ ಕಲಹಗಳು ಇರತಕ್ಕವೇ; ಇರಲೇಬೇಕು. "ಪರರೊಡನೆ ಪ್ರಶ್ನೆ ಬಂದಾಗ ಒಕ್ಕಟ್ಟು: ತಮ್ಮ ತಮ್ಮೊಳಗೆ ಕಲಹ" ಇದು ಭಾರತದ ಆದರ್ಶ ನೀತಿಯಷ್ಟೇ ?

ಈ ಉಭಯ ಸಂಸ್ಕೃತಿಗಳು ಕೂಡಿಕೊಳ್ಳುವುದು ಅವಶ್ಯವೂ ಶಕ್ಯವೂ ಇರುವುದೆಂದು ಜನಕ್ಕೆ ಮನವರಿಕೆಯಾದ ಮೇಲೆ ನಿಸರ್ಗವು ಮುಂದಿನ

ಉಪಾಯಮಾಡಿತೋ? ಇಲ್ಲವೆ, ನಿಸರ್ಗದ ಮುನ್ನೋಟದ ಯುಕ್ತಿಯೇ ಜನರಲ್ಲಿ ಆ ಭರವಸೆಯನ್ನು ಹುಟ್ಟಿಸಿತೋ ತಿಳಿಯದು. ಭಾರತದ ಶೈವ-ವೈಷ್ಣವರನ್ನು ಒಂದುಗೂಡಿಸಲು ಬೇರೊಬ್ಬರು ಅಂದರೆ ಮಹಮ್ಮದೀಯರು ಬರಬೇಕಾಯಿತು. ಅದರಂತೆ ಹಿಂದು ಮುಸಲ್ಮಾನರಲ್ಲಿ ಐಕ್ಯವನ್ನುಂಟು ಮಾಡಲು ಬೇರೊಂದು ಪ್ರಕಾರದ ಸಂಸ್ಕೃತಿಯವರು ಇಲ್ಲಿಗೆ ಬರುವುದು ಅವಶ್ಯವೆಂದು, ನಿಸರ್ಗವು ಅಷ್ಟರೊಳಗೆ ಯುರೋಪ್ಯರ ಮನಸ್ಸಿನಲ್ಲಿ ಹಿಂದುಸ್ಥಾನದ ಮಾರ್ಗವನ್ನು ಹುಡುಕುವದಕ್ಕೂ, ಅದರ ಕೂಡ ವ್ಯಾಪಾರ ಮಾಡುವದಕ್ಕೂ ಆಶೆಯನ್ನು ಹುಟ್ಟಿಸಿತು; ಅವರ ಮಹತ್ವಾಕಾಂಕ್ಷೆಯನ್ನು ಜಾಗ್ರತಗೊಳಿಸಿತು. ಸ್ವಯಂವರಕ್ಕೆ ಬಂದಂತೆ ಪೋರ್ತುಗೀಜರೂ, ಫ್ರೆಂಚರೂ, ಇಂಗ್ಲೀಷರೂ ಡಚ್ಚರೂ, ವ್ಯಾಪಾರದ ಸಂಘಗಳನ್ನು ಏರ್ಪಡಿಸಿಕೊಂಡು ಬಂದೇ ಬಂದರು. ಮಹಮ್ಮದೀಯರನ್ನು ರಜಪೂತರ ಒಡಕು ಬಲಮಾಡಿಕೊಂಡಂತೆ, ಯುರೋಪ್ಯರನ್ನು ಅವರ ವ್ಯಾಪಾರದ ಹಸಿವು ಅಥವಾ ದ್ರವ್ಯಲಾಭವು ಇಲ್ಲಿಗೆಳೆದುಕೊಂಡು ಬಂದಿತು. ಮೊಗಲ ಬಾದಶಹನು ವ್ಯಾಪಾರಕ್ಕೆ ಒಪ್ಪಿಗೆಯನ್ನೂ ಅನುಕೂಲತೆಗಳನ್ನೂ ಕೊಟ್ಟನು. ನಿಸರ್ಗದ ಈ ಯುಕ್ತಿಯಿಂದ ಭಾರತದ ಮೇಲೆ ಯಾವ ಯಾವ ಪರಿಣಾಮವಾಯಿತೆಂದು ವಿವರಿಸಲು ಬೇರೊಂದು ಪ್ರಕರಣವೇ ಬೇಕು.

## ೩ ಐರೋಪ್ಯ ಸಂಬಂಧ

ಮಹಮ್ಮದಿಯರು ಹಿಂದುಸ್ತಾನಕ್ಕೆ ಬಂದ ಹೊಸತಾಗಿಯಂತೂ ಹಿಂದುಗಳೊಡನೆ ಕದನಗಳಾದುದೇನು ಆಶ್ಚರ್ಯವಲ್ಲ. ಆದರೆ ಅವರು ಹಿಂದುಸ್ತಾನದಲ್ಲಿ ನೆಲಸಿ ಹಿಂದುಗಳೊಡನೆ ಹೊಂದಿಕೊಂಡು ಅವರೂ ಭಾರತೀಯರಾದ ಮೇಲೆ ಸಹ ಕದನಗಳಾಗದೆ ಹೋಗಲಿಲ್ಲ. ಮೊದಲಿನ ಕದನಗಳು ವೈರತ್ವದ ಹೊಡೆದಾಟ; ಹಿಂದಣ ಕದನಗಳು ಬಾಂಧವ್ಯದ ಅಂತಃಕಲಹ. ಮಹಮ್ಮದಿಯರು ವೈರಿಗಳಾಗಿ ಭಾರತವನ್ನು ಕೈವಶಪಡಿಸಿಕೊಂಡರು. ಭಾರತೀಯರಾಗಿ ಅಂತ:ಕಲಹವನ್ನು ಹೂಡಿದರು. ಅದರಿಂದ ಭಾರತವು ಜರ್ಜರಿತವಾಯಿತು. ಹೀಗೆ ವಿಂಗಡ ವಿಂಗಡವಾದ ಹಿಂದು ಮುಸ್ಲಿಮ ಕಣಗಳು ಒಂದುಗೂಡಬೇಕಾದರೆ ಹೊರಗಿನದೊಂದು ಘೋರವಾದ ಬಿಸಿಯು ತಗಲುವದು ಅವಶ್ಯಕವಾಯಿತು. ಆ ಕಾರ್ಯಭಾಗವು ಐರೋಪ್ಯರಿಂದ ಸಾಧಿಸಿ ಬಂದಿತು. ಅಲ್ಲಿಯ ವರೆಗೆ ಹೊಂದಿಕೊಂಡಿರಲು ಕಲಿತ ಭಾರತೀಯರಾದ ಹಿಂದು ಮುಸ್ಲಿಮರು ಐರೋಪ್ಯ ಸಂಬಂಧಕ್ಕೆ ಹಿಂಜರಿದು ಕೂಡಿಕೊಂಡಿರಲು ಕಲಿತರು; ಅಥವಾ ಅದು ತಾನಾಗಿಯೇ ಬಂದಿತು. ಅಕಬರನಲ್ಲಿ ಬೀರಬಲ್ ಹಾಗೂ ರಾಜಾ ತೋಡರಮಲ್ಲರು ಇದ್ದುದಾಗಲಿ, ಆದಿಲಶಹರಲ್ಲಿ ಶಹಾಜಿಸರದಾರನಿದ್ದುದಾಗಲಿ, ಟೀಪುವಿಗೆ ಪೂರ್ಣಯ್ಯಮಂತ್ರಿ ಇದ್ದುದಾಗಲಿ, ಹಿಂದು ಮುಸ್ಲಿಮರ ಭವಿಷತ್ ಐಕ್ಯದ ಪೂರ್ಣ ಚಿನ್ಹವೆನ್ನಬಹುದು. ಹಾಗೆ ನೋಡಿದರೆ ಇಂದಿಗೂ ಸಹ ಹಿಂದು-ಮುಸ್ಲಿಮರಲ್ಲಿ ಐಕ್ಯವಿಲ್ಲವೆನ್ನುವಂತಿದೆ. ಅಷ್ಟೇ ಏಕೆ, ಐಕ್ಯವು ಅಶಕ್ಯವೆಂದೇ ತೋರಿಬರುತ್ತಿದೆ. ಅಂಥ ಐಕ್ಯವು ಬರಿಯ ಹಿಂದುಗಳಲ್ಲಾದರೂ ಎಲ್ಲಿದೆ? ಐಕ್ಯವೆಂದರೆ ಪರಕೀಯ ಪ್ರಸಂಗದಲ್ಲಿ ಒಂದುಗೂಡುವ ಬುದ್ಧಿ; ಧರ್ಮರಾಯನು ಹೊರಜಗಳಕ್ಕೆ ನೂರೈವರು ಎಂದ ಹಾಗೆ. ಭಾರತದ ನರಮಂಡಲದಂತಿರುವ ಹಳ್ಳಿಪಳ್ಳಿಗಳಲ್ಲಿಯೂ ನೆಲೆಸಿರುವ ಮುಸ್ಲಿಮರು ಹಿಂದುಗಳೊಡನೆ ಬೆರೆತು ಹೋಗಿದ್ದಾರೆ. ಹಿಂದುಗಳ ಉತ್ಸವ ವೈಭವಗಳಲ್ಲಿ ಭಾಗವಹಿಸುವರು. ತಮ್ಮದರಲ್ಲಿ ಹಿಂದುಗಳನ್ನು ಬರಮಾಡಿಕೊಳ್ಳುವರು. ಹಿಂದು ಹಬ್ಬಗಳಲ್ಲಿ ಮುಸ್ಲಿಮರು ಹೋಳಿಗೆಯುಂಡು

ಹೊಸ ಅಂಗಿ ತೊಟ್ಟುಕೊಳ್ಳುವರು. ಮೊಹರಮುದಲ್ಲಿ ಹಿಂದುಗಳು ಕುಣಿಯುವರು; ಡೋಲೀ ಹೊರುವರು; ದೀವಟಿಗೆ ಹಿಡಿಯುವರು; ಹಲಿಗೆ ಬಾರಿಸುವರು. ಪರಸ್ಪರ ಅಂಜಿಕೆ-ಅವಿಶ್ವಾಸಗಳ ದ್ಯೋತಕವಾದ ಪರದೆಯ ಪದ್ಧತಿಯನ್ನು ಹಿಂದುಗಳು ಅನುಕರಿಸಿದರು; ಹಿಂದುಗಳ ಪದ್ಧತಿಯಂತೆ ಸೀರೆ ಕುಪ್ಪಸಗಳನ್ನು ಮುಸ್ಲೀಮ ಸ್ತ್ರೀಯರು ಧರಿಸಿದರು.

ಇಷ್ಟೆಲ್ಲ ಆದುದು ಒಡಕಿದ್ದಲ್ಲಿಯೇ ಬೆಸಕೆಯೆಂಬ ಸೃಷ್ಟಿನಿಯಮದಿಂದ. ಹಿಂದುಗಳ ಬೆರಕೆಯಾಗುವ ಗುಣವು ಮಂದವಾದರೂ, ಆಗುವಷ್ಟು ಸ್ಥಾಯಿಯಾ ಆಗುವದು. ದಿವಸ ದಿವಸಕ್ಕೆ ಕೂಡಿಕೆಯು ವರ್ಧಿಸುತ್ತಲೇ ಇರುವದು. ಯುರೋಪ್ಯರಾದ ಪೋರ್ತುಗೀಜರೂ ಫ್ರೆಂಚರೂ ಇಂಗ್ಲೀಷರೂ ಡಚ್ಚರೂ ತಂತಮ್ಮ ಸ್ವಾರ್ಥಸಾಧನೆಯ ಭರದಲ್ಲಿ ಭಾರತೀಯರ ಒಡಕನ್ನು ಚನ್ನಾಗಿ ಉಪಯೋಗಿಸಿಕೊಂಡು ಒಳಸೇರಿದರು; ಜಡಭರತರಾಗಿ ಬಿದ್ದ ಭಾರತೀಯರಿಗೆ ತಮ್ಮ ಕಾಲ್ತುಳಿತಕ್ಕೆ ಎಚ್ಚರಾಗುವ ಸುಸಂಧಿಯನ್ನು ತಂದುಕೊಟ್ಟರು. ಅವರ ಕೃತಿಗಳು ಕೈತೂಕದಿಂದ ಬಂಗಾರತೆಗೆದುಕೊಂಡು, ಅದರ ಬೆಲೆಯೆಂದು ಕೊಬ್ಬರಿ-ಬೆಲ್ಲ ಕೊಟ್ಟು ಮುಟ್ಟಿಸುವ ಹಳ್ಳಿಯ ಶೆಟ್ಟರಂತೆ ಇದ್ದರೂ ಆಲಸಿಯಾದವನ ಮೂಲಧನವನ್ನು ಕಿತ್ತುಕೊಂಡು ದುಡಿಯುವ ಪ್ರೇರಣೆ ಹುಟ್ಟಿಸಿದ ಶ್ರೇಯಸ್ಸು ಅವರಿಗೆ ಬಾರದೆ ಇರದು. ಭಾರತಕ್ಕೆ ಬಂದ ಯುರೋಪ್ಯರಲ್ಲಿ ಮುಂಗೈಜೋರು ಮಾಡಿದವರು ಇಂಗ್ಲೀಷರು. ಆತ್ಮಸಂರಕ್ಷಣೆಗಾಗಿ ತಂದ ತಮ್ಮ ಸೈನ್ಯವನ್ನು ಬಿದ್ದವರನ್ನು ಎತ್ತಿ ಹಿಡಿಯುವ ಸಹಾಯಕ ಅಥವಾ ಪರೋಪಕಾರಕ ಪದ್ಧತಿಯಲ್ಲಿ ಬಳಸಿದರು. ಅವರು ಬಿದ್ದವರನ್ನು ಮಾತ್ರ ಎತ್ತಿಹಿಡಿಯುವವರು; ಎದ್ದವರನ್ನು ಎತ್ತಿಹೊಡೆಯುವವರು. ಆದ್ದರಿಂದ ಎದ್ದವರು ಅಳಿದರು. ಬಿದ್ದವರನ್ನು ಎತ್ತಿಕೊಂಡುದರಿಂದ ಅವರು ಎದ್ದವರೂ ಎದ್ದವರಾದ ಕಾರಣದಿಂದ ಅಳಿದವರೂ ಆಗುತ್ತ ಬಂದುದರಿಂದ ಎದ್ದವರ ಸುಳಿವೇ ಅಡಗಿತು; ಬಿದ್ದವರು ಕಾಣದಾದರು. ಭಾರತೀಯರ ಒಡಕಿನಿಂದ ತೀವ್ರವಾಗಿ ಕಂಡುಬರುವ ಭಿನ್ನತೆಯು ಮಾತ್ರಲೋಪವಾಗಿ, ಏತಕ್ಕಾಗಿ ಭಾರತೀಯರು ಬಡಿದಾಡುತ್ತಿದ್ದರೋ ಅದೆರ ಮೂಲಕೀಲಿಯನ್ನೇ ಬ್ರಿಟಿಶರು ತಮ್ಮ ಸೊಂಟಕ್ಕೆ ಕಟ್ಟಿಕೊಂಡರು. ಹೋಳಿಗೆ ಕಳಕೊಂಡ ಬೆಕ್ಕುಗಳಂತೆ ಭಾರತೀ

ಯರ ಸ್ಥಿತಿಯಾಗಿ, ಆ ಬಳಿಕ ಜಾಣತನವನ್ನು ಕಲಿಯಬೇಕೆಂದು ಕನವರಿಸ ತೊಡಗಿದರು.

ರಾಜ್ಯಗಳು ಅಳಿದವು; ಸಾಮ್ರಾಜ್ಯಗಳು ಹೇಳಹೆಸರಿಲ್ಲವಾದವು. ದಿಲ್ಲಿಯ ಬಾದಶಹನು ಉರುಳಿದನು; ಪೇಶ್ವೆಯು ಬ್ರಹ್ಮಾವರ್ತಕ್ಕೆ ತೆರಳಿದನು; ಮೀರಕಾಶಿಮ-ಮೀರಜಾಫರರು ಮೊದಲತುತ್ತಿನ ಅನ್ನವಾದರು; ಮಹಾರಾಷ್ಟ್ರಸರದಾರರು ಮಾಯವಾದರು; ಟೀಪುವಿನ ಕೊನೆಯ ಪ್ರಯತ್ನವಾಗಿ ಕೋಟೆಯೊಡನೆ ತಾನೂ ನೆಲಕ್ಕುರುಳಿದನು. ಇನ್ನೇನುಳಿಯಿತು? ಏನಿಲ್ಲೆಂದರೂ ಏಳುನೂರರ ವರೆಗೆ ಸಂಸ್ಥಾನಗಳು ದೇಶೀಯರಾಜರ ವಶದಲ್ಲಿ ರಾರಾಜಿಸಿದವು. ಆದರೂ ಭಾರತಕ್ಕೆ ಇಂಗ್ಲಿಷರು ಸಾಮ್ರಾಟರು. ಅವರು ರಾಜ್ಯವನ್ನು ಗೆದ್ದುಕೊಂಡರು; ವ್ಯಾಪಾರವನ್ನು ಕೈವಶಪಡಿಸಿಕೊಂಡರು; ಭಾರತೀಯ ಉದ್ಯೋಗ-ವೃತ್ತಿಗಳು ಕುಗ್ಗಿದವು. ಮಲೆತುನಿಂತ ಸಂಪತ್ತು ಸಮುದ್ರಗಳನ್ನು ಸಹ ದಾಟಿ ಹರಿದು ಹೋಗಹತ್ತಿತ್ತು. ದೇಶೀಯಸೈನಿಕರು ಕೂಳುಗೇಡಿಗಳಾಗಿ ಬರಿಗೈಯವರಾದರು. ಭಾರತಕ್ಕೆ ಬಡತನದ ದೀಕ್ಷೆ ಬಂದಿತು; ಹೊನ್ನು ಹೆಣ್ಣುಗಳನ್ನು ಹೀನಗಳೆಯುವ ಭಾರತೀಯರಿಗೆ ಬಡತನವು ಸುಲಭವಾಗಿ ಪೈಗೆ ಒಗ್ಗಿತು. ಬಿಳಿಯರು ಬಡವರನ್ನುತಮ್ಮವರೆಂದರು. ಯಾವಾಗ? ಕ್ರಿಸ್ತೀ ಧರ್ಮದ ದೀಕ್ಷೆ ತೋರಿಸಿದಮೇಲೆ. ಹೀಗೆ ಭಾರತದ ಉಷ್ಣಮಾಪಕ ಯಂತ್ರದೊಳಗಿನ ಪಾರಜವು ಶೂನ್ಯಾಂಶಕ್ಕೆ ಇಳಿಯಿತಾದರೂ ಅದರ ಗತಿಯು ಮಾತ್ರ ಕಟ್ಟಾಗಿದ್ದಿಲ್ಲ. ಆದರೆ ಬ್ರಿಟಿಶರ ವಶವರ್ತಿಯಾದ ಭಾರತಕ್ಕೆ ಎಂದೂ ಲಭಿಸದ ಕೆಲವು ಸೌಲಭ್ಯಗಳೂ ಅನುಕೂಲಗಳೂ ದೊರೆತವು. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಸರ್ವಭಾರತವು ಒಂದೇ ಆಳಿಕೆಗೆ ಒಳಪಟ್ಟು ಸಾಮ್ರಾಜ್ಯವಾದದ್ದರಿಂದ, ತುಂಡ್ಯತುಂಡಾದ ಭಾರತ ಪುರುಷನ ಅಂಗಾಂಗಗಳನ್ನು ಹೊಂದಿಸಿಟ್ಟಂತಾಯಿತು. ದೇಶದ ತುಂಬ ಲೋಹಮಾರ್ಗಗಳನ್ನು ರಚಿಸಿದ್ದು ತಮ್ಮ ವ್ಯಾಪಾರದ ಸೌಕರ್ಯಕ್ಕಾಗಿಯೇ ಇರಲಿ, ರಾಜಕೀಯ ಸೌಲಭ್ಯಕ್ಕಾಗಿಯೇ ಇರಲಿ, ಕಡೆಗೆ ಸೈನ್ಯದ ಚಲನವಲನೆಗಾಗಿಯೇ ಇರಲಿ—ಅದರ ಪ್ರಯೋಜನವು ಏನಾಗಿದೆಯೆಂದರೆ—ಎಲುವು ಮುರಿದ ಅಂಗಾಂಗಗಳನ್ನು ಕಂಬಿಯಿಂದ ಬಿಗಿದು ಕಟ್ಟುವ ಚಿಕಿತ್ಸೆಯಂತೆ ಭಾರತದ ದೃಢೀಕರಣಕ್ಕೆತುಂಬ ಸಹಾಯವಾಯಿತು.

ಕನ್ನಡ ನಾಡಿನವರಿಗೆ ಪಂಜಾಬವಾಗಲಿ, ಬಂಗಾಲದವರಿಗೆ ಗುಜರಾತವಾಗಲಿ ಸಮೀಪವಾಯಿತು. ಕನ್ನಡಿಗರೂ ಬಂಗಾಲಿಗಳೂ ತಮಿಳರೂ ಮಹಾರಾಷ್ಟ್ರರೂ, ಸಬಂಧಿಕರಾದರು. ಇನ್ನು ಸಮಗ್ರ-ಭಾರತಕ್ಕ ತಮ್ಮದೇ ಆಗಲಿ ನಮ್ಮದೇ ಆಗಲಿ ಶಿಕ್ಷಣ ಕೊಡುವುದಕ್ಕೆ ಆರಂಭಿಸಿದುದರಿಂದ ವ್ಯಕ್ತಿಗಾಗಲಿ ರಾಷ್ಟ್ರಕ್ಕಾಗಲಿ ಯಾವಹಿತವೂ ಇಂದಿನವರೆಗೆ ಆಗಲಿಲ್ಲವೆಂದು ಶಿಕ್ಷಣ ತಜ್ಞರು ಹೇಳುತ್ತ ಬಂದಿದ್ದರೂ ಬರಲೊಲ್ಲರೇಕೆ; ಸುಶಿಕ್ಷಿತರಾದವರು ಬ್ರಿಟಿಶ ಸಾಮ್ರಾಜ್ಯದ ರಾಹುಟಿಯನ್ನು ಬಿಗಿತರಗೊಳಿಸುವ ಗೂಟಗಳೇ ಆಗಿರಲೊಲ್ಲರೇಕೆ; ಅದರಿಂದ ನಿಶ್ಚೇಷ್ಟಿತ ಭಾರತಕ್ಕೆ ಕೃತ್ರಿಮ ಶ್ವಾಸೋಚ್ಛ್ವಾಸಮಾಡಿಸಿದಂತಾಗಿ ತೀರ ಸಾವಕಾಶವಾಗಿಯಾದರೂ ಜೀವಕಳೆಯೇರಲು ಆರಂಭವಾಯಿತು. ಅಖಿಲಭಾರತವು ಒಂದೇ ತರದ ಕಾಯ್ದೆಕಟ್ಟಳೆಗಳಿಗೆ ಒಳಪಟ್ಟಿದ್ದರಿಂದ, ಒಂದೇ ಮೆದುಳಿನಿಂದ ಹಬ್ಬಿದ ನರಮಂಡಲದಂತೆ, ಕಾಲತುದಿಗೆ ತಾಕಿದ ಮುಳ್ಳನ್ನು ಬಿಡಿಸಲು ಕೈತುದಿಯು ಹಾತೊರೆದು ಬರುತ್ತಿರುವಂತೆ ಆಸಾಮುದಲ್ಲಾದ ಏರಿಳಿತಗಳು ಸಹ ದೂರಿನ ಕನ್ನಡಿಗರಿಗೆ ತಮ್ಮ ಎರಿಳಿತಗಳಂತೆ ಅನಿಸಿದವು. ಇದು ಭಾರತದ ಜೀವಕಳೆ ಅಷ್ಟೇ ಅಲ್ಲದೆ, ಚೇತನವನ್ನು ತುಂಬುವ ಉಪಾಯವೂ ಆಗಿ ಪರಿಣಮಿಸಿತು.

ದೀಪಕ್ಕೆ ಹವೆಯು ಆವಶ್ಯಕತೆಯುಂಟೆಂದು, ಗಾಳಿ-ಬಿರುಗಾಳಿಗಳು ಬೀಸಿದರೆ ಅದು ತಾಳಬಲ್ಲದೇ? ಶಕ್ಯವಿಲ್ಲ. ಮುಸಲ್ಮಾನರು ದಾಳಿಯ ಮೇಲೆ ದಾಳಿಮಾಡಿದರು; ಪಾಶ್ಚಾತ್ಯರು ಹಿಂಡುಗಟ್ಟಿಕೊಂಡು ಬಂದು ಎರಗಿದರು. ಮುಸಲ್ಮಾನರ ಸ್ವಭಾವವು ಹುಂಬತನದ್ದು; ಏಟು ಬಹಳ ಬೇನೆಗೀಡು ಮಾಡಿದರೂ, ನಮ್ಮದನ್ನೇನೂ ಅಪಹರಿಸಿಕೊಂಡು ಹೋಗಲಿಲ್ಲ ಅವರು ನಮ್ಮವರಾಗಿ ನಮ್ಮೊಳಗೆ ಬೆರೆತುಕೊಂಡರು. ಆದ್ದರಿಂದ ಅವರ ಚಲನವಲನಗಳಿಂದ ನಿದ್ರಿತಭಾರತವು ತುಸು ಮಿಸುಕಿದರೂ ಎಚ್ಚರಾಗಲು ಸಾಧ್ಯವಾಗಲಿಲ್ಲ. ಆದರೆ ಪಾಶ್ಚಾತ್ಯರು ಶೀತಪ್ರದೇಶದವರು; ನಮಗಾಗಿ ಕಾಲಿಗೆರಗಿ ಕಾಣಿಸದಂತೆ ಕಾಲುಂಗುರ ಉಚ್ಚಿಕೊಳ್ಳುವರೆನ್ನಿರಿ; ಮೆಲ್ಲಗೆ ಮುದ್ದುಕೊಟ್ಟು ಮೂಗುತಿ ಉಚ್ಚಿಕೊಳ್ಳುವರೆನ್ನಿರಿ; ಮಹಮ್ಮದಿಯರ ಪೆಟ್ಟು ಭಾರತಶಕ್ತಿಯ ಹ್ರಾಸವನ್ನಷ್ಟೇ ಮಾಡಿದರೆ, ಬ್ರಿಟಿಶರ ಒಳಪೆಟ್ಟು ರಕ್ತಕ್ಷಯಕ್ಕೆ ಹಾಕಿತು. ಅವರು ಇನ್ನೂರು ವರುಷ ಭಾರತದೊಡನೆ

ಸಂಬಂಧವಿಟ್ಟರೂ ಭಾರತದಲ್ಲಿ ನೆಲೆಸಲಿಲ್ಲ; ಇದು ತಮ್ಮ ದೇಶವೆಂದು ತಿಳಿಯಲಿಲ್ಲ. ಗಳಿಸಿದುದೆಲ್ಲ ಸ್ವದೇಶಕ್ಕೆ ಸಾಗಿತು; ಅಖಂಡವಾಗಿ, ಅವ್ಯಾಹತವಾಗಿ ಸಾಗಿತು; ತಿರುಗಿ ಬಾರದ ದಾರಿಗೆ ಸಾಗಿತು. ಭಾರತ ದೇಶಕ್ಕೆ ಐರೋಪ್ಯದ ಉಡಿಗೆತೊಡಿಗೆ ಬಂದಿತೇ ಹೊರತು, ಭಾರತದ ಹವೆಯು ಅವರ ಚಣ್ಣ ಕೋಟುಗಳನ್ನು ಕಳೆಯಿಸಲಿಲ್ಲ. ಅವರು ತಮ್ಮ ಸಂಸ್ಕೃತಿಯನ್ನೇ ಕಾಯ್ದುಕೊಳ್ಳುವ ಅಭಿಮಾನತೊಟ್ಟರೇ ಹೊರತು, ಉಷ್ಣಹವೆಗೆ ಸೊಪ್ಪು ಹಾಕಲಿಲ್ಲ. ಬಾಲ್ಯದಲ್ಲಿ ಬತ್ತಲೆ ತಿರುಗುವ ಮಾನವನು, ಅರಿವೆ-ಅಂಚಡಿಗಳನ್ನು ಉಪಯೋಗಿಸಲು ಕಲಿತಿದ್ದರಿಂದ ಸುಧಾರಕನಾದನೆಂದೂ, ಅದುದರಿಂದ ಹೆಚ್ಚು ಅರಿವೆಗಳನ್ನು ಉಪಯೋಗಿಸುವುದು ಸುಧಾರಣೆಯ ಮೇಲ್ಮಟ್ಟವನ್ನು ಸೂಚಿಸುವುದೆಂದೂ ತಿಳಿಕೊಂಡಂತೆ, ಭಾರತೀಯರು ಪಾಶ್ಚಾತ್ಯರ ಬಹುವಸ್ತ್ರಧಾರಣಪದ್ಧತಿಯನ್ನೇ ಅನುಸರಿಸಿದರು. ಭಾರತದ ಐವತ್ತಾರು ದೇಶಗಳಲ್ಲಿಯ ಆಚಾರಭೇದಗಳು ಕರಗಿ ಒಂದು ರೂಪಾಂತರಕ್ಕೆ ಬರುತ್ತಿರುವುದು ಶೋಚನೀಯವೆನಿಸಿದರೂ ಶುಭಲಕ್ಷಣವೇ ಸರಿ. ಇಷ್ಟಕ್ಕೆ ಹೊಯ್ದಾಟವು ಒಮ್ಮೆ ಮುಗಿಯಲೇ ಬೇಕಷ್ಟೇ? ಮುಗಿಯುವದರೊಳಗಾಗಿ ಭಾರತದ ನವನಿರ್ಮಾಣಕಾರ್ಯವು ಉಂಟಾಗದೆ ಗತ್ಯಂತರವಿಲ್ಲ. ಇಂಥ ಬಿರುಗಾಳಿಗೆ ಕೃತ್ರಿಮ ದೀಪಗಳು ಆರಿ ತಣ್ಣಗಾಗಬಹುದು. ಆದರೆ ವಿದ್ಯುದ್ದೀಪವನ್ನು ಯಾವ ಬಿರುಗಾಳಿಯು ಅಡಗಿಸಬಹುದು? ಅಂತು ಭಾರತವು ಪಡುವಣದ ಬಿರುಗಾಳಿಗೆ ಕಂಗೆಡುವಂತಾದರೂ ಅದರಿಂದ ಒಳ್ಳೆಯ ಪರಿಣಾಮವು ಅದರ ಮೇಲೆ ಆಗದೆ ಹೋಗಲಿಲ್ಲ. ಅದು ನಾಳಿನ ಭಾರತಭವಿತವ್ಯವನ್ನು ನಂಬಿದವರಿಗೆ ಚೆನ್ನಾಗಿ ನಿಚ್ಚಳವಾಗಿ ಕಾಣದಿರದು.

ಬ್ರಿಟಿಶರು ಚಿಕ್ಕರಾಷ್ಟ್ರದವರು. ಜನಸಂಖ್ಯೆ ಸಣ್ಣದು. ಆದರೂ ಜಗತ್ತಿನಲ್ಲಿ ಮೇಲಿನ ಸ್ಥಾನವನ್ನು ಆಕ್ರಮಿಸಿದ ಜನಾಂಗ ಅವರದು. ಅವರ ಭಾಷೆ ಜಾಗತಿಕಭಾಷೆ. ಹೊಸಕಾಲಕ್ಕೆ ಬೇಕಾಗುವ ಸಕಲ ಅಂಗಗಳಿಂದಲೂ ಪರಿಪೂರ್ಣವಾದ ಭಾಷೆ. ಯಾವ ವಿಚಾರವನ್ನೂ ತಿಳಿಯಾಗಿ ಪ್ರಕಟಿಸುವ ಹದವರಿತ ಭಾಷೆ. ಬ್ರಿಟಿಶರ ವ್ಯವಹಾರ ಜಾಣ್ಮೆ, ಮುತ್ಸದ್ದಿತನ, ಶಿಸ್ತು, ಆಜ್ಞಾಪಾಲನ, ಸಾಹಸಾದಿ ಗುಣಗಳು ಜಗತ್ತನ್ನೇ ಬೆರಗುಗೊಳಿಸಿವೆ. ಫ್ರೆಂಚರು, ಪೋರ್ತುಗೀಜರು, ಡಚ್ಚರು ಇವರನ್ನೆಲ್ಲ ಬಿಟ್ಟು

ಕೊಟ್ಟು ಇಂಗ್ಲಿಷರೊಡನೆ ದೀರ್ಘಸಂಬಂಧವುಂಟಾದುದರಲ್ಲಿ ಸೃಷ್ಟಿಯ ರಹಸ್ಯವೇನೊ ಇರಬೇಕಷ್ಟೇ? ಇಂಗ್ಲಿಷ್ ಭಾಷೆಯು ಭಾರತಕ್ಕೆಲ್ಲ ರಾಷ್ಟ್ರ ಭಾಷೆಯಂತೆ ವ್ಯವಹರಿಸಲ್ಪಟ್ಟಿದ್ದರಿಂದ ಹಿಂದೆಂದೂ ಸಾಧಿಸದ ಬಹುಮೂಲ್ಯ ವಾದ ಸೌಲಭ್ಯವಿಂದು ಭಾರತೀಯರಿಗೆ ಸಿಕ್ಕಂತಾಯಿತು. ಪಂಜಾಬಿ ಯೊಡನೆ ತಮಿಳನು ತನ್ನ ಸುಖದುಃಖಗಳನ್ನು ಹೇಳುವುದಕ್ಕೆ ಮೊದಲು ಯಾವ ಅನುಕೂಲತೆಯಿತ್ತು? ಪೂರ್ವದಲ್ಲಿ ಸಂಸ್ಕೃತ ಭಾಷೆಯು ಮಧ್ಯಸ್ಥ ಭಾಷೆಯಾಗಿತ್ತೆಂದು ಕೆಲವರು ಹೇಳುತ್ತಾರೆ. ಈಗ ಅದನ್ನಾರು ಬಲ್ಲರು? ಇಂಗ್ಲಿಷು ಸಮಗ್ರ ಭಾರತದ ರಾಷ್ಟ್ರ ಭಾಷೆಯಾದುದರಿಂದ ನಮ್ಮನಮ್ಮಲ್ಲಿ ಮಾತುಕತೆಗಳು ಆರಂಭವಾದವು. ಸಂಭಾಷಣೆಯಿಂದ ಸಹವಾಸವೂ, ಸಹವಾಸದಿಂದ ಸಖ್ಯವೂ, ಸಖ್ಯದಿಂದ ಒಕ್ಕಟ್ಟೂ, ಒಕ್ಕಟ್ಟಿನಿಂದ ಮಹಾ ಕೃತಿಯೂ ಕ್ರಮಪ್ರಾಪ್ತವಾದವುಗಳು. ಸಂಭಾಷಣೆಗೆ ಇಂಗ್ಲಿಷ ಭಾಷೆಯು ಸಾಧಕವಾಗಿ, ಭಾರತದ ಅಂಗ-ವಂಗ-ಕಲಿಂಗಾದಿ ಐವತ್ತಾರು ದೇಶಗಳನ್ನು ಪರಸ್ಪರ ಮಾತುಕತೆಗಳಿಗೆ ತೊಡಗಿಸಿತು. ಇಂಗ್ಲಿಷಿನ ಉಸಿರು ಒಡಿದು ದೇಶ ಭಾಷೆಗಳೂ ಚೇತರಿಸಿಕೊಂಡು ಏಳತೊಡಗಿದವು. ಉಗಿಬಂಡಿ ಮೋಟಾರಿ ನಂಥ ತೀವ್ರ ಗಮನದ, ಅಲ್ಪಖರ್ಚಿನ ಪ್ರವಾಸಾನುಕೂಲತೆ, ಅಂಚೆ ಹಾಗೂ ತಂತೀಖಾತೆಗಳ ಸೌಲಭ್ಯ, ವೃತ್ತಪತ್ರಿಕೆಗಳ ಸೌಕರ್ಯ ಇವು ಗಳಿಂದ ಪರಸ್ಪರರಲ್ಲಿ ಸಹವಾಸಉಂಟಾಯಿತು. ಮೇಲಿಂದ ಮೇಲೆ ಕೂಡುವದ ರಿಂದ ಪರಸ್ಪರರಲ್ಲಿ ಸ್ನೇಹವಂಕುರಿಸಿ ಅದರಿಂದ ಪ್ರಸಂಗಾನುಸಾರ ಪರಸ್ಪರ ಸಹಾಯಮಾಡುವ ಮನಸ್ಸೂ, ಸುಖದುಃಖಗಳಲ್ಲಿ ಸಹಾನುಭೂತಿಯನ್ನು ತೋರಿಸುವ ಬುದ್ಧಿಯೂ ಹುಟ್ಟಿದವು; ಅದೇ ಸಖ್ಯ. ಉಭಯತರ ಸಖ್ಯವು ಬಾಹ್ಯದಲ್ಲಿ ಐಕ್ಯಸಂಬಂಧವಾಗಿ ಕಂಗೊಳಿಸಿತು. ಅಖಿಲಭಾರತ ರಾಷ್ಟ್ರೀಯ ಸಭೆಯೆ ಆಗಲಿ, ಹಿಂದು ಮಹಾಸಭೆಯೇ ಆಗಲಿ, ಮುಸ್ಲಿಂಲೀಗವೇ ಆಗಲಿ ಅವೆಲ್ಲ ಸಖ್ಯತತ್ವದ ಮೇಲೆಯೇ ತಂತಮ್ಮ ಅಸ್ತಿವಾರವನ್ನು ಹಾಕಿ ಅಸ್ತಿತ್ವ ದಲ್ಲಿ ಬಂದವು. ಸಖ್ಯತತ್ವವನ್ನು ಅನುಸರಿಸಿದ್ದರೆ ವಿವಿಧಉದ್ದೇಶ-ಧ್ಯೇಯ ಗಳುಳ್ಳ ಅನೇಕ ಸಭಾ-ಸಂಸ್ಥೆಗಳೇಕೆ? ಅವೆಲ್ಲ ಬೇರೆಬೇರೆಯಾಗಿ ತಂತಮ್ಮ ಪೂರ್ತಿಯ ವಿಚಾರಿಸಿ ತಂತಮ್ಮ ಯೋಗ್ಯಹಿತವನ್ನಷ್ಟೇ ಗುರಿಯಾಗಿಟ್ಟು ಕೊಂಡಿದ್ದರೂ ನಿಜವಾದ ಕಲ್ಯಾಣವು ಏತರಿಂದೆಂಬ ನಿರ್ಣಯಕ್ಕೆ ಬರು

ವುದರ ಸಾಧನಗಳೆ ಎನ್ನಬಹುದು. ಊರೆಲ್ಲ ಒಕ್ಕಟ್ಟಿದ್ದರೆ ಬೇರೆಬೇರೆ ಮನೆತನಗಳೇ ಇರಬಾರದೇ? ಬೇರೆಬೇರೆ ಮನೆತನಗಳ ಸುಸ್ಥಿತಿಯಿಂದಲೇ ಊರಒಕ್ಕಟ್ಟಿಗೆ ಬೆಲೆಬರುತ್ತದೆ. ಸಂಸ್ಥೆಗಳು ಬೇರೆಬೇರೆ ಆದರೇನು? ಗುರಿಯು ಒಂದೇ. ಒಂದೇ ಗುರಿಗೆ ಬೇರೆಬೇರೆ ನಿಟ್ಟಿನಿಂದ ದೃಷ್ಟಿಯಿಟ್ಟು ಬಾಣಬಿಡಬೇಕೇ ? "ಉಭಯಜನಮೇಕಾರ್ಥಕೆಳಸಿದಡೆ ಮತ್ತೆ ಲೇಸಾದ ಪುದೇ?" ಒಂದು ಕಡೆಗೆ ನಾವೆಯನ್ನು ಒಯ್ಯಬೇಕಾದರೆ ಎಲ್ಲರೂ ಅದಕ್ಕ ನುಕೂಲವಾಗುವಂತೆಯೇ ಹುಟ್ಟು ಹಾಕಬೇಕಲ್ಲವೇ? ಅಹುದು, ನಿಜವಾಗಿಯೂ ಹಾಗೆ ಮಾಡಬೇಕಾಗುವದು. ನೂರುಲಕ್ಷ ಜೀವಗಳುಳ್ಳ ನೂರೊಂದು ತಲೆಗಳು, ಮೂರು ಗುಂಪಿನಲ್ಲಿ ಒಟ್ಟುಗೂಡಿರುವಾಗ, ಮೂರು ಹೋಗಿ ಒಂದಾಗಲು ತಡವಾಗುವದೇ? ಅದು ಯಾವಾಗ? ನೂರು ಹೋಗಿ ಮೂರಾದದ್ದು, ಒಕ್ಕಟ್ಟಿನ ಸ್ಪಷ್ಟಚಿಹ್ನವೆಂದು ಹೇಳಬಹುದಲ್ಲವೇ? ಒಕ್ಕಟ್ಟಿನಿಂದ ಮಹಾಕೃತಿಯಾಗುವ ಮುಂದಿನ ಮೆಟ್ಟಲು ಬಂದಿದೆಯಲ್ಲ! ಆ ಸುಮುಹೂರ್ತದಲ್ಲಿ ಎಲ್ಲರೂ 'ಸಾವಧಾನ' ಅನ್ನುವ ಪ್ರಸಂಗವು ಬಂದೇ ಬರುವದು.

'ಕಾಳನ ಕರಿನಿದ್ದೆ'ಯಿಂದ ಭಾರತವು ಎಚ್ಚರಾಗಿದೆ. ಅದರ ಅಂಗಾಂಗಗಳೆಲ್ಲವೂ ಅಲುಗಾಡತೊಡಗಿವೆ. ನಾಡುನಾಡುಗಳು ಪ್ರಭಾತಗೀತೆಗೆ ಅಣಿಗೊಂಡಿವೆ. ತಂತಮ್ಮ ಕೊರತೆಯ ಬಗ್ಗೆ ಎಲ್ಲ ನಾಡುಗಳೂ, ಜನಗಳೂ ಮತಪಂಗಡಗಳೂ ಕೊರಗುತ್ತಿವೆ; ಅದಕ್ಕೆ ತಕ್ಕಉಪಾಯವನ್ನು ತಲೆ ತುರಿಸಿ ಅರಿಸಿಕೊಳ್ಳುತ್ತಿದ್ದಾರೆ. ಕೆಲವರು ಬೇಡಿ ಪಡೆದುಕೊಳ್ಳುವುದೂ, ಕೆಲವರು ಶಕ್ತಿಯಿಂದ ತೆಗೆದುಕೊಳ್ಳುವುದೂ ಸ್ವಾಭಾವಿಕ. ಪೂರ್ವಪರಂಪರೆಯ ಸ್ಮರಣೆಮಾಡಿಕೊಂಡು, ಆಧುನಿಕ ಪರಿಸ್ಥಿತಿಯನ್ನು ಕಣ್ತೆರೆದು ನೋಡಿ ತಲೆದೂಗಿ, ಮನಸ್ಸಿನಿಂದ ಒಪ್ಪಿ ಮುಂದಿನ ಕೆಲಸಕ್ಕೆ ಕೈಹಾಕುತ್ತಿದ್ದಾರೆ. ಒಬ್ಬರ ಗುರಿಯು ತಾಗುತ್ತಿದೆ; ಇನ್ನೊಬ್ಬರದು ತಪ್ಪುತ್ತಿದೆ. ಮತ್ತೊಬ್ಬನಿಗೆ ಬಿಲ್ಲೇ ಅಟುಕದು; ಹೀಗೆ ವಿವಿಧವಾಗಿ ಕಾರ್ಯಕ್ಕೆ ತೊಡಗಿ ಅರ್ಧಶತಮಾನವು ಕಳೆದುದರಿಂದ ತರುಣರ ಕೃತಿಗಳೂ, ಪ್ರೌಢರ ಉಪಾಯಗಳೂ, ಪ್ರಯೋಗದಲ್ಲಿ ಬರುತ್ತಿರುವುದನ್ನು ನಾವು ಎಚ್ಚತ್ತ ಭಾರತದಲ್ಲಿ ಸಂಪೂರ್ಣವಾಗಿ ಕಾಣಬಹುದು.

# ೪ ಎಚ್ಚತ್ತ ಭಾರತ

ಗೆಲಿದುಕೊಂಡಂತೆ ಭಾರತದ ಪ್ರದೇಶಗಳನ್ನು ಕೂಡಿಸಿ, ಅದನ್ನು ಪ್ರಾಂತವನ್ನಾಗಿಯೋ ಇಲಾಖೆಯನ್ನಾಗಿಯೋ ಮಾಡಿಕೊಂಡು ಬ್ರಿಟಿಶರು ಸಂಪೂರ್ಣ ಹಿಂದುಸ್ತಾನವನ್ನು ಆಳಹತ್ತಿದರು. ಮಹಮ್ಮದಿಯರಂತೆ ಬ್ರಿಟಿಶರು ಪರಕೀಯರೆ ಆದರೂ ಒಬ್ಬರು ಪೌರ್ವಾತ್ಯರು; ಇನ್ನೊಬ್ಬರು ಪಾಶ್ಚಾತ್ಯರು. ಪೌರ್ವಾತ್ಯಸಂಸ್ಕೃತಿಯು ಎಷ್ಟೇ ಭಿನ್ನವೆನಿಸಿದರೂ ಪಾಶ್ಚಾತ್ಯ ಸಂಸ್ಕೃತಿಯಂತೆ ತೀರ ಬೇರೆಯೆನಿಸಲಾರದು. ಮಹಮ್ಮದಿಯರು–ಬ್ರಿಟಿಶರು ನೀರು–ಹುಳಿ ಇದ್ದಹಾಗೆ. ಅವುಗಳಲ್ಲಿ ಒಂದು ಹಾಲಲ್ಲಿ ಬೆರೆತರೆ ಹಾಲು ತುಸು ತಿಳಿಯಾದರೂ ಏಕರಸ–ಏಕರೂಪವಾಗಿ ಕಾಣಿಸುವದು. ಇನ್ನೊಂದು ಬೆರೆತರೆ ಹಾಲು ಮೊಸರಾಗುವದು. ಪಾಶ್ಚಾತ್ಯರ ‘‘ಈ ಹೊಸದಾದ ಮತ್ತು ತೀರ ವಿರುದ್ಧವಾದ ಸಂಸ್ಕೃತಿಯ ಹೊಯಲಿನಿಂದ ಮೊದಲಿನೇಟಿಗೆ ಬಾಳಲಸಮರ್ಥವಾಗಿದ್ದ ಹಳೆಯದು ಹಾಳಾಯಿತು. ಉಳಿದುದೆಷ್ಟೋ ಕರಗಿತು. ಇನ್ನುಳಿದದ್ದು ಕಳೆಗುಂದಹತ್ತಿತು.’’ ಭಾರತೀಯರು ರಾಜ್ಯವನ್ನೆಲ್ಲ ಕಳಕೊಂಡರು; ಇಲ್ಲವೆ ಗೆದ್ದು ಬ್ರಿಟಿಶರಿಗೆ ಕೊಟ್ಟರು; ತಾವು ತಮ್ಮ ಮನೆಯಲ್ಲಿಯೇ ಪರರಿಗೆ ಆಳಾದರು. ಸೈನಿಕರಾಗಿದ್ದ ಅದೆಷ್ಟೋ ವೀರರು ಕೆಲಸಗೇಡಿಗಳಾದ್ದರಿಂದ ಅವರ ಶೌರ್ಯವು ಜಂಗುತಿನ್ನಹತ್ತಿತು. ಸೈನ್ಯದಲ್ಲಿ ಸೇರಿಕೊಂಡ ಉಳಿದವರು ಉಗಿಬಂಡಿ ತಾರಾಯಂತ್ರ, ಹೊಸತರದ ಕೋವಿಗಳು ಇವನ್ನೆಲ್ಲ ನೋಡಿ ಜಾತಿ ಧರ್ಮಗಳ ಸರ್ವನಾಶದ ಕಾಲವು ಬಂದಿತೆಂದೂ, ಹೇಗಾದರೂ ಮಾಡಿ ನಮ್ಮ ದೇಶವನ್ನು ಮರಳಿ ಸ್ವಾಧೀನಪಡಿಸಿ ಕೊಳ್ಳೋಣವೆಂದೂ, ಆರುವ ಮುಂದೆ ದೀವಿಗೆಯು ಮತ್ತೊಮ್ಮೆ ಥಾಳವಾಗುವಂತೆ ಭಾರತೀಯರ ವೀರತನವು ಉಜ್ವಲಗೊಂಡಿತು. ಅದಕ್ಕೆ ಭಾರತದ ಸ್ವಾತಂತ್ರ್ಯ ಕಲ್ಪನೆಯ ಜನನಿಯೆಂದು ಕೆಲವರೆನ್ನುತ್ತಾರೆ; ಬಂಡಾಯವೆಂದು ಕೆಲವರು ಹೆಸರಿಡುತ್ತಾರೆ. ಆದರೆ ಅದರಿಂದ ಭಾರತದ ಅಳಿದುಳಿದ ಕೆಲವು ಶಕ್ತಿಗಳೂ ಕಳೆಗುಂದಿದವು. ಭಾರತದ ಶುದ್ಧ ಕಲೇವರ ಮಾತ್ರ ಉಳಿಯಿತು. ಆ ಬಂಡಾಯದಿಂದ ಕಂಪನಿಯ ರಾಜ್ಯವು ಅಳಿಯಿತಾದರೂ ಅದು

ಯರ ಕೈವಶವಾಗಲಿಲ್ಲ. ರಾಣಿಯ ರಾಜ್ಯಮಾತ್ರ ಆಯಿತು. ಮಹಾರಾಣಿಯು ಕೊಟ್ಟ ಆಶ್ವಾಸನಗಳು ಭಾರತಕ್ಕೆ ಸಕ್ಕರೆಯಂತೆ ರುಚಿಸಿದವು; ಅದು ಬಾಯಿತೆಗೆದು ಚಪ್ಪರಿಸಿತು. ತಮ್ಮ ಆಳಿಕೆಯ ಭದ್ರತೆಗಾಗಿಯೋ, ತಮ್ಮ ಸಂಸ್ಕೃತಿಯ ಸೂಜಿಮದ್ದು ಚುಚ್ಚಲೆಂದೋ ಅಕ್ಷರಾಭ್ಯಾಸವೂ ಇಂಗ್ಲಿಷ ಶಿಕ್ಷಣವೂ ಆರಂಭವಾದವು. ಆತ್ಮಶ್ರದ್ಧೆಯನ್ನು ಕಳೆದುಕೊಂಡ ಭಾರತೀಯರು ಹೊಸ ಶಿಕ್ಷಣ–ಸಂಸ್ಕೃತಿಗಳನ್ನು ಸಂತೋಷದಿಂದ ಸ್ವಾಗತಿಸಿದರು; ವೈಪರೀತು ಶಸ್ತ್ರಾಸ್ತ್ರಗಳನ್ನು ತೆಗೆದು ಕೊಟ್ಟರು. ಪರಕೀಯರ ವಿಚಾರಾಭ್ಯಾಸಗಳ ಹೀನ–ದೀನಾನುಕರಣವು ಒಂದು ಕಡೆಗಿದ್ದರೂ, ಇನ್ನೊಂದು ಕಡೆಗೆ ಪೂರ್ವದ ರಕ್ತಗತ ಪ್ರವೃತ್ತಿಗಳ ಜೀವಹರಣದಿಂದಾದ ಜಾಡ್ಯವಿತ್ತು. ಹೀಗೆ "ಇಮ್ಮಡಿ ಭಾರತದಲ್ಲಿ ಇನ್ನೊಂದು ಕಡಿಮೆ ಪ್ರಾಣಬಲದ ಜೀವವು ಸಿಕ್ಕಿದ್ದರೆ ನುಗ್ಗುನುರಿಯಾಗಿ ನಷ್ಟವಾಗುತ್ತಿತ್ತು" ಎಂದೂ, ಸುದೈವದಿಂದ ಭಾರತದ ದೇಹದಲ್ಲಿ ಸುಪ್ತವಾಗಿದ್ದ ಪ್ರಾಣಶಕ್ತಿಯು ಕುತ್ತಕ್ಕೀಡಾಗಿದ್ದರೂ ಸತ್ತಿರಲಿಲ್ಲವಾದ್ದರಿಂದ ಕುತ್ತದ ಹೊಟ್ಟೆಯಲ್ಲಿಯೇ ಅದರ ಮದ್ದಿರುವಂತೆ ಅದೇ ಜಾಡ್ಯವನ್ನಳಿಸಿ ಪ್ರಾಣೋದ್ದೀಪಕವಾಯ್ತೆಂದೂ ಶ್ರೀ ಅರವಿಂದಯೋಗಿಗಳು ಅಭಿಪ್ರಾಯ ಪಡುತ್ತಾರೆ.

ಬಂಗಾಲವು ಮೊಟ್ಟಮೊದಲು ಬ್ರಿಟಿಶರ ಅಧೀನವಾಯ್ತು. ಅಲ್ಲಿ ಸಿಪಾಯರ ಬಂಡಾಯಕ್ಕಿಂತ ಮೊದಲೇ ಇಂಗ್ಲಿಷ ಶಾಲೆಗಳು ಆರಂಭವಾದವು (೧೮೩೫). ಬಂಗಾಲಿಗಳು ಮೊದಲೇ ಭಾವನಾವಶರು. ಆದ್ದರಿಂದ ಅವರು ಬ್ರಿಟಿಶರ ಅಂತರಂಗವನ್ನು ಸುಲಭವಾಗಿ ಪ್ರವೇಶಿಸಿದರು. ಅವರ ಪರಿಚಯವನ್ನು ಬಹುಬೇಗ ಪಡೆದರು. ಮೇಲಾಗಿ ಬಂಗಾಲ ಇಲಾಖೆಯು ಒಂದೇ ಭಾಷೆಯನ್ನು ಆಡುವವರದು. ಅದರಿಂದ ಅವರಲ್ಲಿ ಐಕ್ಯಸಹಾನುಭೂತಿಗಳು ಸಹಜವಾಗಿ ಪಲ್ಲವಿಸಿದವು. "ಐರೋಪ್ಯಜೀವನ ಸಂಸ್ಕೃತಿಗಳ ಅಡ್ಡ ಏಟಿನಿಂದ ಕೆಲಕಾಲ ಸಂಹಾರವೂ ಕೊಳೆತು ಹುಳಿತು ಹೋಗುವಿಕೆಯೂ ಸಾಗಿದವು. ಆದರೇನು? ಅದರ ಸಂಘರ್ಷದಿಂದ. ಮೂರು ಅಗತ್ಯವಾದ ಪ್ರೇರಣೆಗಳುಂಟಾದವು." (೧) ಬೌದ್ಧಿಕ ಮತ್ತು ವಿಮರ್ಶಕ ಶಕ್ತಿಯು ಉದ್ಭವಿಸಿತು. (೨) ಹೊಸಸೃಷ್ಟಿಯ ಇಚ್ಛೆ ಹುಟ್ಟಿತು (೩)ಅಭಿನವಆದರ್ಶಗಳನ್ನು ತಿಳಿದು ಮೈಗೂಡಿಸಿಕೊಳ್ಳುವ ಆವಶ್ಯಕತೆಯನ್ನು

ಮನಗಂಡಿತು. ಇಂಗ್ಲಿಷ ವಿದ್ಯಾಭ್ಯಾಸದಿಂದಲೂ, ಪಾಶ್ಚಾತ್ಯದೇಶಗಳ ಇತಿಹಾಸಾವಲೋಕನದಿಂದಲೂ ಭಾರತದಲ್ಲಿ ಹುಟ್ಟಿದ ಸ್ವಾತಂತ್ರ್ಯ ಪ್ರೀತಿ, ದೇಶಪ್ರೇಮ, ಅದಕ್ಕಾಗಿ ಬಲಿದಾನಕೊಡುವ ತ್ಯಾಗಬುದ್ಧಿ ಮೊದಲಾದ ರಾಷ್ಟ್ರೀಯ ಭಾವನೆಗಳೂ, ನಿದ್ರಾಜಡವಾದ ವೈದಿಕತತ್ವಗಳನ್ನು ಐರೋಪ್ಯ ಬೆಳಕಿನಲ್ಲಿ ಕಂಡುಕೊಂಡು ನವಜೀವನಕ್ಕೆ ಒಗ್ಗುವಂತೆ ಪರಿಮಾರ್ಜಿಸಿ ಕೊಳ್ಳುವ ವಿಚಾರಗಳೂ ಬಂಗಾಲದಲ್ಲಿ ಮೊದಲು ತಲೆದೋರಿದವು. ಭಾರತದ ಸಾರ್ವಜನಿಕ ಜೀವನವು ಬಂಗಾಲ ಪ್ರಾಂತದಲ್ಲಿ ಮೊದಲುಆರಂಭ ವಾಯಿತು. ಬ್ರಿಟಿಶ ಇಂಡಿಯನ್ ಅಸೋಸಿಯೇಶನ್ ಎಂಬ ಸಂಸ್ಥೆಯು ೧೮೫೧ ರಲ್ಲಿ ಸ್ಥಾಪಿತವಾದದ್ದು ಬಂಗಾಲದಲ್ಲಿ, ಬಳಿಕ ಮುಂಬಯಿ ಮದ್ರಾಸ ಪ್ರಾಂತಗಳಲ್ಲಿ ಬಾಂಬೇ ಅಸೋಸಿಯೇಶನವೂ,ಮದ್ರಾಸ ನೆಟೀವ್ಸ್ ಅಸೋ ಸಿಯೇಶನ್ನೂ ಜನ್ಮತಾಳಿದವು. ರಾಷ್ಟ್ರೀಯ ಸಭೆಯ ಸ್ಥಾಪನೆಗೆ ಯಾರೇ ಕಾರಣರಾಗಿರಲೊಲ್ಲರೇಕೆ, ಅದರ ಕಚ್ಚಾಸ್ವರೂಪವೆಂಬಂತೆ ಹಿಂದೀ ರಾಷ್ಟ್ರೀಯ ಪರಿಷತ್ತು ಕಲಕತ್ತೆಯಲ್ಲಿ ಕೂಡಿತು. ಮೊದಲನೆಯ ರಾಷ್ಟ್ರಸಭೆಯು ಕಲಕತ್ತೆಯಲ್ಲಿ ಕೂಡದೆ ಮುಂಬಯಿಯಲ್ಲಿ ಕೂಡಿದರೂ ಅದಕ್ಕೆ ಅಧ್ಯಕ್ಷರು ಕಲಕತ್ತೆಯ ನಾಮಾಂಕಿತ ಬ್ಯಾರಿಸ್ಟರರಾದ ಶ್ರೀ ಉಮೇಶಚಂದ್ರ ಬ್ಯಾನರ್ಜಿ ಯವರು. ಹೀಗೆ ಸಾಮಾಜಿಕ ಸುಧಾರಣೆಯ ವಿಷಯದಲ್ಲಿ ರಾಜಾರಾಮ ಮೋಹನರನ್ನಾಗಲಿ, ಪಂಡಿತ ಈಶ್ವರಚಂದ್ರರನ್ನಾಗಲಿ ತೋರಿಸಬಹುದು. ಧಾರ್ಮಿಕ ನವ ಆಂದೋಲನವೂ ಅಲ್ಲಿಯೇ ಆರಂಭವಾಗಿದ್ದು ಅದಕ್ಕೆ ಮಹರ್ಷಿ ದೇವೇಂದ್ರನಾಥರೂ ಕೇಶವ ಚಂದ್ರಸೇನರೂ ಅಗ್ರಗಣ್ಯರು. ರಾಮ ಕೃಷ್ಣ ಪರಮಹಂಸರನ್ನಾಗಲಿ, ವಿವೇಕಾನಂದರನ್ನಾಗಲಿ ಜಗತ್ತೇಬಲ್ಲದು. ರವೀಂದ್ರನಾಥರ ಕವನಗಳು ಬಂಗಾಲದಿಂದಲೇ ವಿಶ್ವವ್ಯಾಪಿಯಾದವು. ಜಗದೀಶಚಂದ್ರರ ವಿಜ್ಞಾನವಾಗಲಿ ಶ್ರೀಅರವಿಂದರ ಪೂರ್ಣಯೋಗವಾಗಲಿ, ಪ್ರವಹಿಸತೊಡಗಿದ್ದು ಬಂಗಾಲದಿಂದಲೇ. ಸ್ವತಂತ್ರ ಭಾರತದ ಜಯಹಿಂದ ಘೋಷಣವನ್ನು ಗಗನಮಂಡಲಕ್ಕೇರಿಸಿದ ಸುಭಾಸಚಂದ್ರರು ಬಂಗಾಲದವರೇ. ಹೀಗೆ ಬಂಗಾಲವು ಭಾರತದ ರಸಶಾಲೆಯಾಗಿದೆ. ಶ್ರೀ ಅರವಿಂದರ ಮಾತಿನಲ್ಲಿ ಹೇಳಬೇಕಾದರೆ "ಬಂಗಾಲವೇ ಭಾರತಶಕ್ತಿಯ ಪರೀಕ್ಷೆಯ ಕುಲುಮೆಯು ಮತ್ತು ಪ್ರಥಮ ಕರ್ಮಶಾಲೆಯು" ಅದು ಭಾರತದ ಮೆದುಳಾಗಿದೆ.

ಶುಭ್ರಜ್ಯೋತ್ಸ್ನೆಯೂ ಪುಲಕಿತಯಾಮಿನಿಯೂ ಆದ ಭರತದೇವಿಗೆ 'ವಂದೆ ಮಾತರಂ' ಎಂದು ಪ್ರಸಿಷ್ಟ್ಯಾರನಾದ ಬಂಕಿಮಚಂದ್ರನು ಹಾಡಿದ್ದನ್ನೇ ಇಡಿಯು ಭಾರತವು ಹಿಮ್ಮೇಳದಲ್ಲಿ ಹಾಡಿತು. ಪ್ರಾಂತಿಕ ಭಾಷೆಗಳು ಇಂಗ್ಲಿಷಿನ ಥಳಕಿಗೆ ಮಿಣಿಕಿದರೂ ಬಹುಶಃ ಅವೆಲ್ಲ ಬಂಗಾಲಿಯ ದೀವಟಿಗೆಯಿಂದ ಹೊತ್ತಿಸಿಕೊಂಡು ತಂದ ಕೈದೀಪಗಳೇ ಆಗಿವೆ. ಪಾತಾಳದಿಂದ ಕಚದೇವನು ಸಂಜೀವಿನೀ ಮಂತ್ರವನ್ನು ಕಲಿತುಕೊಂಡು ಬಂದಂತೆ ಬಂಗಾಲಿಯು ಇಂಗ್ಲಿಷ ಸಾಹಿತ್ಯದ ಆಳವಾದ ತಳದಲ್ಲಿಳಿದು, ತನ್ನ ಸಾಹಿತ್ಯ ಜೀವನವನ್ನು ಸಂಪೂರ್ಣಗೊಳಿಸಿತು. ಅದರ ಫಲವಾಗಿಯೇ ಇಂದು ಬಂಗಾಲದದಲ್ಲಿ ಉದಯವಾದ ಚಿತ್ರಕಲೆಯು ನಾಳಿನ ಜಗತ್ತಿನ ನವಸ್ವರೂಪದ ಪೂರ್ವಸೂಚನೆಯಂತೆಯೂ, ಅಪೂರ್ವ ಮಾಧುರಿಯಂತೆಯೂ ಸರ್ವಸಂಪನ್ನವಾಗಿದೆಯೆಂದು ಹೇಳುತ್ತಾರೆ.

ಬಂಡಾಯವು ಅಡಗಿದ ಬಳಿಕ ಮಹಾರಾಣಿಯ ಜಾಹೀರನಾಮೆಯು ಪ್ರಕಟವಾಯಿತಷ್ಟೇ ! ಆದರೆ ಅದು ವ್ಯವಹಾರದಲ್ಲಿ ಬರುವಷ್ಟರಲ್ಲಿ ಅದರ ಸ್ವರೂಪವೇ ಬೇರೆಯಾಯಿತು. ಮೊದಲೇ ವ್ಯಾಪಾರವೃತ್ತಿಯವರಾದ ಬ್ರಿಟಿಶರು ಮಲೆತುನಿಂತ ಹೊನ್ನಿನ ಕಡಲನ್ನು ಹೊಳೆಯಂತೆ ಇಂಗ್ಲಂಡಿಗೆ ಹರಿಸಿಕೊಂಡು ಹೋಗುವದನ್ನು ಕಂಡ ದಾದಾಭಾಯಿಯು ಕೂಗಿ ಬೊಬ್ಬಾಟ ಮಾಡಲು ಸುಶಿಕ್ಷಿತರ ಕಣ್ಣು ತೆರೆದವು. ಆಯ್.ಸಿ.ಎಸ್ ಪರೀಕ್ಷೆಯ ವಿಷಯವಾಗಿ ಮಾಡಿದ ದಾದಾಭಾಯಿಯವರ ೨೦ವರ್ಷಗಳ ಪ್ರಯತ್ನವೂ ನೀರ ಮೇಲಿನ ಬರಹವಾಗುತ್ತಿರುವುದನ್ನು ಕಂಡು ರಾಷ್ಟ್ರವು ತಲೆತುರಿಸಿಕೊಂಡು ವಿಚಾರಕ್ಕೆ ತೊಡಗಿತು. ಆ ಪರೀಕ್ಷೆಯ ವಯೋಮಾನವನ್ನು ಕಡಿಮೆಮಾಡಿದ ಕೂಡಲೇ ಸುರೇಂದ್ರನಾಥ ಬ್ಯಾನರ್ಜಿಯವರು ಲಾಹೋರ, ಆಗ್ರಾ, ದಿಲ್ಲಿ ಮೊದಲಾದ ಕಡೆಗ ಅಡ್ಡಾಡಿ, ಜನಜಾಗ್ರತಿ ಮಾಡಿದರು. ಈ ಆಂದೋಲನದಿಂದಲೇ ಅಖಿಲಭಾರತೀಯ ಸ್ವರೂಪವುಂಟಾಗಲು ಆರಂಭವಾಯಿತು. ಭಾರತದಲ್ಲಿಯೂ ಇಂಗ್ಲಂಡದಲ್ಲಿಯೂ ಈ ವಿಷಯದಲ್ಲಿ ಪ್ರಯತ್ನಿಸಲು ರಾಷ್ಟ್ರೀಯ ನಿಧಿಯನ್ನು ಕೂಡಿಸಲಾಯಿತು. ಕಲಕತ್ತೆಯಲ್ಲಿ ಹಿಂದೀರಾಷ್ಟ್ರೀಯ ಪರಿಸತ್ತು ಸೇರಿತು. ಭಾರತವು ಎಚ್ಚತ್ತಿರುವದು ಅಧಿಕಾರಿಗಳಿಗೆ ಮನವರಿಕೆಯಾಯಿತು. ಆದರೆ ಬಂಡಾಯದ ಪೆಟ್ಟು ಮಾತ್ರ ಅವರು ಮರೆತಿರಲಿಲ್ಲ. ಜನರ ಅಂತಃಕರಣವಲ್ಲಿ ದಬ್ಬ

ಲ್ಪಟ್ಟ ಭಾವನೆಗಳಿಗೆ ಹೊರಗೆಬರಲು ಯೋಗ್ಯಮಾರ್ಗವನ್ನು ಮಾಡಿಕೊಡದಿದ್ದರೆ, ಅವು ರಾಜ್ಯಕ್ರಾಂತಿಯ ರೂಪದಿಂದ ಸ್ಫೋಟವಾಗಬಹುದೆಂದೂ' ಕ್ರಾಂತಿಕಾರಕ ವಿಚಾರಗಳಿಗೆ ಒಲಿಯದಂತೆ ಅವುಗಳನ್ನು ಯೋಗ್ಯಮಾರ್ಗಕ್ಕೆ ಹಚ್ಚುವದು ಅವಶ್ಯವೆಂದೂ ಅನಿಸಿದ್ದರಿಂದ ಸರ್ ಹ್ಯೂಮಸಾಹೇಬರು ಕಾಂಗ್ರೆಸ್ ಘಟನೆಗೆ ಕೈಹಾಕಿದರು. ಸರ್ ಹ್ಯೂಮಸಾಹೇಬರು ಹಿಂದುಸ್ತಾನ ಸರಕಾರದ ಹೋಮಡಿಪಾರ್ಟಮೆಂಟಿನ ಸೆಕ್ರೆಟರಿ. ಅವರು ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟು ಕಾಂಗ್ರೆಸ್‌ನ್ನು ಅಸ್ತಿತ್ವಕ್ಕೆ ತರಲು ನಡ ಕಟ್ಟಿದರು. ಅವರು ಒಂದು ಪ್ರಕಟನೆ ಹೊರಡಿಸಿ ಭಾರತೀಯರ ಸಹಾನುಭೂತಿಯನ್ನು ಸಂಪಾದಿಸಿದರು. ಇಂಗ್ಲಂಡಿಗೆ ಹೋಗಿ ಪಾರ್ಲಮೆಂಟ ಸಭಾಸದರ ಸಲಹೆ ಸಹಾನುಭೂತಿಗಳನ್ನು ಪಡೆದರು. ಕೊನೆಗೆ ೧೮೮೫ನೇ ಡಿಸಂಬರದಲ್ಲಿ ಶ್ರೀ ಉಮೇಶಚಂದ್ರ ಬ್ಯಾನರ್ಜಿಯವರ ಅಧ್ಯಕ್ಷತೆಯಲ್ಲಿ ಮೊದಲನೆಯ ರಾಷ್ಟ್ರಸಭೆಯು ಮುಂಬೈಯಲ್ಲಿ ಸೇರಿತು. ಭಾರತದ ಸರ್ವಪಂಗಡಗಳಿಗೂ ಏಕದೃಷ್ಟಿಯಾದ ರಾಷ್ಟ್ರಸಭೆಯ ನಿರ್ಮಾಣಕ್ಕಾಗಿಯಾಗಲಿ ಅದರ ದೃಢತೆಗಾಗಲಿ ಭಾರತ ಪಿತಾಮಹರೆಂದೆನಿಸಿಕೊಂಡ ದಾದಾಭಾಯಿಯವರು ಪಟ್ಟ ಶ್ರಮ, ತೊಟ್ಟಸಹನೆ, ಅಷ್ಟಿಷ್ಟೆಂದು ಹೇಳಲಿಕ್ಕಾಗದು.

ಯುರೋಪ್ಯಶಿಕ್ಷಣದಿಂದ ಮೊದಲು ನಮ್ಮವರಿಗಾದದ್ದು ಆತ್ಮತಿರಸ್ಕಾರ; ಅಂದರೆ ಇಲ್ಲನ್ನುವ ಕೊರಗು. ಅದು ಪಡೆಯುವದಾರಿಯನ್ನು ಹುಡಕಲು ಹಚ್ಚುವದು. ಮೊದಮೊದಲು ತಪ್ಪುದಾರಿಗೂ ಇಳಿಯಬಹುದು. ಮುಂದೆ ಮುಂದೆ ದಾರಿತಪ್ಪಿದ ತಿಳುವಳಿಕೆಯೂ ಉಂಟಾಗುವದು, ಕೊನೆಗೊಮ್ಮೆ ನಿಶ್ಚಿತಮಾರ್ಗಕ್ಕೆ ಬರುವುದು ಸ್ವಾಭಾವಿಕ. ಇಂಗ್ಲಿಷ ಕಲಿತವರಲ್ಲಿ ದೇವಧರ್ಮಗಳ ಸಲುವಾಗಿ ಸಂಶಯವು ತಲೆದೋರಿತು. ಹುರುಳಿಲ್ಲದ ಕರ್ಮಠತನವು ತ್ಯಾಜ್ಯವೆಂದು ಕಂಡಿತು. ಹೃದಯದಿಂದ ತಿಳಕೊಳ್ಳಬಹುದಾದ ಪ್ರಶ್ನೆಗಳನ್ನು ಬುದ್ಧಿಯಿಂದ ಬಿಡಿಸಲು ತೊಡಗಿದ ಸುಶಿಕ್ಷಿತಜನರು ಹುದಿಲಲ್ಲಿ ಬೀಳಹತ್ತಿದರು. ವೇದೋಪನಿಷತ್ತುಗಳನ್ನು ಕುತೂಹಲದಿಂದ ಓದತೊಡಗಿದರು. ಅವುಗಳ ಚರ್ಚೆನಡೆಯಿತು. ಅವುಗಳ ಮಂತ್ರಶಕ್ತಿಯಿಂದಲೋ ಮಂತ್ರಗಳ ಧ್ವನಿಶಕ್ತಿಯಿಂದಲೋ ಅವರ ಆತ್ಮಕ್ಕೆ ಸಮಾಧಾನವೆನಿಸಿತು. ಅವುಗಳ ಪಠನದಿಂದಲೂ ಸ್ತಬ್ಧವಾಗಿ ಕುಳಿತು ಆ ಬಗೆಗೆ ವಿಚಾರಿಸುವುದರಿಂದಲೂ ದೊರಕೊಳ್ಳುವ ಶಾಂತಿಯೇ ಧರ್ಮದೇವರುಗಳ ರಹಸ್ಯವೆಂದು ಊಹಿಸಿದರು. ಉಪನಿಷತ್ತು

ಗಳೊಳಗಿನ ಮಂತ್ರಗಳನ್ನು ಆಧರಿಸಿ ತಮಗೆ ಒಗ್ಗುವಂಥ ಒಂದು ರೀತಿ ನಡುವಳಿಕೆಗಳನ್ನು ರೇಖಿಸಿಕೊಂಡರು. ಅದು ಬುದ್ಧಿ ಪ್ರಾಧಾನ್ಯವುಳ್ಳವರಿಗೆ ಸರಿಹೋರಿದ್ದರಿಂದ ಅವರೆಲ್ಲರೂ ಸೇರಿ "ಬ್ರಹ್ಮಸಮಾಜ"ವೆಂಬ ಧರ್ಮ ಸಂಸ್ಥೆಯನ್ನು ಸ್ಥಾಪಿಸಿಕೊಂಡರು. ರಾಜಾ ರಾಮಮೋಹನರಾಯರೂ ದೇವೇಂದ್ರನಾಥಠಾಕೂರರೂ ಆ ಸಮಾಜಕ್ಕೆ ಪ್ರಮುಖರು. "ಈಶಾ ವಾಸ್ಯಮಿದಂ ಸರ್ವಂ" ಎಂಬಮಂತ್ರವೇ ದೇವೇಂದ್ರನಾಥರಿಗೆ ಪ್ರವೇಶ ದ್ವಾರವಾದಂತಾಗಿ ಅಲ್ಲಿಂದಲೇ ಅಂತರಂಗಕ್ಕಿಳಿದು ಒಂದು ಪರಿಚ ಯವನ್ನು ಪಡೆದರೆಂದೂ, ಧ್ಯಾನ ಪ್ರಿಯರಾಗ ಅವರು ಮಹರ್ಷಿಯೆನಿಸಿ ಕೊಂಡರೆಂದೂ ಹೇಳುತ್ತಾರೆ. ಬ್ರಹ್ಮಸಮಾಜವು ಮುಂದೆ ಇಭ್ಭಾಗವಾಗಿ ಸಾಧಾರಣ ಬ್ರಹ್ಮಸಮಾಜವೆಂಬ ಬೇರೊಂದು ಶಾಖೆಯೂ ಬಳಕೆಯಲ್ಲಿ ಬಂದಿತು. ಬ್ರಹ್ಮಸಮಾಜವು ಕಲಕತ್ತೆಯ ಪೂರ್ವಕ್ಷಿತಿಜದಲ್ಲಿ ಉದಯಿ ಸಿದರೆ, ಪ್ರಾರ್ಥನಾಸಮಾಜವು ಮುಂಬಯಿಯ ಪಶ್ಚಿಮಾಕಾಶದಲ್ಲಿ ಕಾಣಿಸಿಕೊಂಡಿತು. ಅದಕ್ಕೆ ನ್ಯಾಯ ಮೂರ್ತಿ ರಾನಡೆ ಮೊದಲಾ ದವರ ಪ್ರಯತ್ನವು ಕಾರಣವಾಯಿತು. ಪಂಜಾಬಿನ 'ಆರ್ಯಸಮಾಜ'ವು ದಯಾನಂದರಿದ ಪ್ರವೃತ್ತಿತು. ದಯಾನಂದರೇ ಬರೆದ ವೇದಾರ್ಥವಾದ "ಸತ್ಯಾರ್ಥಪ್ರಕಾಶಿಕೆ"ಯೇ ಆರ್ಯ ಸಮಾಜದವರಿಗೆ ಕೈಗನ್ನಡಿ. ಕಲಕತ್ತೆ-ಮುಂಬಯಿಗಳಲ್ಲಿ 'ಸಮಾಜ'ಗಳಾದರೆ ಮದ್ರಾಸಕ್ಕೆ ಬೇಡವೇ? ಅಲ್ಲಿಯೂ ಆಯಿತು — "ಬ್ರಹ್ಮಜ್ಞಾನ ಸಮಾಜ" — ಅಂದರೆ ಥಿಯಾಸ ಫಿಕಲ್ ಸೊಸಾಯಟಿ. ಅನಿಬೆಸಂತಮ್ಮ ಅದರಸ್ಥಾಪಕರು. ಅದು ಐರೋ ಪ್ಯದವರ ಆಗಿ. ಕಂಬಾರಕೇರಿಯಲ್ಲಿ ಸೂಜಿಮಾರಲು ಬಂದಂತೆ ಇರೋಪ ದಿಂದ ಇಲ್ಲಿಗೆ ಬಂದರೂ ನವಶಿಕ್ಷಣವನ್ನು ಪಡೆದ ಬೌದ್ಧಿಕರಿಗೆ ಅದರ ಆವಶ್ಯಕತೆ ಬಹಳವಿತ್ತು. ಅಂತೂ ಸುಶಿಕ್ಷಿತರಲ್ಲಿ ಸ್ವಾತಂತ್ರ್ಯ-ರಾಷ್ಟ್ರ ಪ್ರೇಮಗಳಂತೆ, ದೇಶಧರ್ಮಗಳನ್ನು ಅರಿಯುವ ಲವಲವಿಕೆಯೂ, ಮೆಲ್ಲಗ ಕಾಣಿಸಿಕೊಳ್ಳುವುದಕ್ಕೆ ಅಡ್ಡಿ ಇಲ್ಲ. ಈ "ಸುಧಾರಕ ಸಮಾಜಗಳು ಧರ್ಮದ ಬೆಂಬಲವಿದ್ದಲ್ಲಿ ಮಾತ್ರ ದೊಡ್ಡ ಉದ್ಘೋಷಣೆಯಿಂದ ತಮ್ಮ ಸಮಾಜ ಸುಧಾರಣೆಯ ಕಾರ್ಯಗಳನ್ನು ಪಾಶ್ಚಾತ್ಯ ಉದಾಹರಣೆ-ಮೇಲುಪಂಕ್ತಿ ಗಳಿಗೆ ಜೋಟ್ಟುಮಾಡಿಯೇ, ಹಳೆಗಾಲದ ಪಡಿಕಟ್ಟು ಅಥವಾ ಜಾಯೆ

ಮಾನಗಳನ್ನೆತ್ತಿ ತೋರಿಸಿಯೇ ಮುಂದುವರಿದವು". ಆದರೆ ಅವುಗಳಲ್ಲಿ "ಪರಿಪುಷ್ಟವಾದ ಪ್ರಾಮಾಣಿಕತೆಯಿಲ್ಲದ್ದರಿಂದ ಜನರ ಅಂತಃಕರಣಗಳನ್ನು ಅವು ಹಿಡಿಯಲಿಲ್ಲ" ವೆಂದು ಶ್ರೀ ಅರವಿಂದರ ಅಭಿಪ್ರಾಯ.

ಕಲಿತ ಜನರು ಹೀಗೆ ಧಾರ್ಮಿಕ ವಿಷಯದಲ್ಲಿ ಎಡವುತ್ತ ಮುಗ್ಗುತ್ತ ಸಾಗಿದಾಗ ಅದೇ ಬಂಗಾಲದಲ್ಲಿ ಇನ್ನೊಂದು "ಪರಿಪುಷ್ಟವಾದ ಪ್ರಾಮಾಣಿಕತೆ" ಯನ್ನು ಮನಗಾಣಿಸಿಕೊಡುವ ಅದ್ಭುತ ಶಕ್ತಿಯು ಅವತರಿಸಿತು. ಸುಶಿಕ್ಷಿತ ತರುಣರ ಪ್ರತಿನಿಧಿಸ್ವರೂಪದಂತಿರುವ ನರೇಂದ್ರನೆಂಬ ಪದವೀಧರ ತರುಣನ ಅಂತರಂಗವು ದೇವನ ಬಗೆಗೆ ತಳಮಳಗೊಂಡಿತು. ಅವನು ಸಿಕ್ಕಸಿಕ್ಕವರನ್ನು "ದೇವರನ್ನು ನೀವು ಕಂಡಿದ್ದೀರಾ?" ಎಂಬ ಪ್ರಶ್ನೆ ಮಾಡಹತ್ತಿದನು. ಕಾಲೇಜಿನ ಪುಸ್ತಕಾಭ್ಯಾಸದಲ್ಲಿ ಅದಕ್ಕೆ ಸಮಾಧಾನ ದೊರೆಯದ್ದರಿಂದ ಅದನ್ನು ಬಿಟ್ಟುಕೊಟ್ಟು ನಡೆದನು. ಸಾಧುಗಳನ್ನು ಕಂಡನು; ಸನ್ಯಾಸಿಗಳನ್ನು ಕೇಳಿದನು. ಮಹರ್ಷಿಗಳೆನಿಸುವ ದೇವೇಂದ್ರನಾಥರ ಕಡೆಗೂ ಹೋದನು. ಅಲ್ಲಿಯೂ ಅದೇ ಪ್ರಶ್ನೆ— "ದೇವರನ್ನು ನೋಡಿದ್ದೀರಾ?"–"ಛೇ! ಅದು ಹೇಗೆ ಶಕ್ಯ?" ಎಂಬ ಉತ್ತರಕ್ಕೆ ನಿರಾಶನಾಗಿ–"ಹಾಗಾದರೆ ಗಡ್ಡಬಿಟ್ಟು ಕಣ್ಣು ಮುಚ್ಚಿಕೊಂಡು ಏಕೆ ಕುಳಿತಿರುವಿರಿ?" ಎಂದು ಅಬ್ಬರಿಸಿ ಮುಂದೆ ನಡೆದನು. ಕಡೆಗೆ ದಕ್ಷಿಣೇಶ್ವರ ದೇವಾಲಯಕ್ಕೆ ಬಂದನು–ಅಲ್ಲಿ ಒಬ್ಬ ಹಳ್ಳಿಯ ಸಾಧು; ಸುಶಿಕ್ಷಿತನಲ್ಲ; ಕ್ಷೌರ ಬೆಳೆದ ಮುಖ; ಅರ್ಧನಗ್ನವಾದ ಶರೀರವುಳ್ಳ ಆತನನ್ನು ಕುರಿತು— "ದೇವರನ್ನು ನೀವು ಕಂಡಿದ್ದೀರಾ?" ಎಂದು ತರುಣನು ಕೇಳುವುದೇತಡ— "ಓಹೋ! ನಿಶ್ಚಯವಾಗಿ!!. ನೀನೂ ನೋಡಬೇಕಂದರೆ ತೋರಿಸಬಲ್ಲೆನು." ಎಂದುತ್ತರ ಬಂದಿತು. ಆಯಿತು. ಅದನ್ನು ಕೇಳಿದ ಆ ತರುಣನ ಜೀವನವು ಆ ಸಾಧುವಿಗೇ ಅರ್ಪಿತವಾಯಿತು. ಅಶಿಕ್ಷಿತಗುರು, ಪದವೀಧರಶಿಷ್ಯ! ಗುರುವಿನ ಹೆಸರು ರಾಮಕೃಷ್ಣ ಪರಮಹಂಸ, ಗುರು ಶಿಷ್ಯನಿಗೆ ದೇವತತ್ವವನ್ನು ಮನಗಾಣಿಸಿಕೊಟ್ಟನು. ಯಾವ ಪ್ರೊಫೆಸರನಿಂದಲೂ ಸಾಧ್ಯವಾಗದ ಜ್ಞಾನಪ್ರಾಪ್ತಿ ಆತನಿಗಾಯಿತು. ತರುಣನು ಸನ್ಯಾಸಿಯಾದನು. 'ವಿವೇಕಾನಂದ' ಎಂಬ ಹೆಸರು ತೊಟ್ಟನು. ಗುರುವಿನ ಕೃಪೆಯಿಂದ ಅವರ ಜ್ಞಾನಸಂಪತ್ತಿಗೆ ಅಧಿಕಾರಿಯಾದನು.

ಪಾಶ್ಚಾತ್ಯರ ಸಂಪರ್ಕದಿಂದ ಭಾರತೀಯರಿಗೆ ಕಲ್ಯಾಣವಾದಂತೆ, ಭಾರತೀಯರ ಸಂಸರ್ಗದಿಂದ ಪಾಶ್ಚಾತ್ಯರಿಗೂ ಕಲ್ಯಾಣವಾಯಿತೆಂಬ ಮಾತನ್ನು ಮರೆತರಾಗದು. ಪೃಥ್ವಿಯ ಮೇಲೆ ಪಾಶ್ಚಾತ್ಯ - ಪೌರ್ವಾತ್ಯ ಸಂಸ್ಕೃತಿಗಳು ಎರಡು, ಒಂದು ಲೌಕಿಕ ಇನ್ನೊಂದು ಆತ್ಮಿಕ. ಲೌಕಿಕ ವೊಂದೇ ಅದೆಷ್ಟು ಪೂರ್ಣತೆಗೊಂಡರೂ ಅದು ಅಪೂರ್ಣವೇ. ಆತ್ಮಿಕವು ಅದೆಷ್ಟು ಪರಮಾವಧಿಗೇರಿದರೂ ಅದು ಅಪೂರ್ಣವೇ. ಲೌಕಿಕ ಬಿಟ್ಟರೆ ಜೀವನಕ್ಕೆ ಕೌಶಲ್ಯವಿಲ್ಲ; ಆತ್ಮಬಿಟ್ಟರೆ ಸಮೃದ್ಧಿಯಿಲ್ಲ. ಅಂತೆಯೇ ಈಶಾ ವಾಸ್ಯ ಉಪನಿಷತ್ತು—ಅವಿದ್ಯ ಅಂದರೆ ಲೌಕಿಕದಿಂದ ತಮಸ್ಸು ಪ್ರಾಪ್ತ ವಾದರೆ, ವಿದ್ಯೆ ಅಂದರೆ ಆತ್ಮಜ್ಞಾನದಿಂದ ಅದಕ್ಕಿಂತ ಹೆಚ್ಚಿನ ತಮಸ್ಸು ಪ್ರಾಪ್ತವಾಗುವದೆಂದೂ, ಆದಕಾರಣ ಲೌಕಿಕದಿಂದ ಮೃತ್ಯುವನ್ನು ಗೆದ್ದು, ಆತ್ಮಜ್ಞಾನದಿಂದ ಅಮರತ್ವವನ್ನು ಪಡೆಯಬೇಕೆಂದೂ ಸಾರಿ ಪೌರ್ವಾತ್ಯ—ಪಾಶ್ಚಾತ್ಯರಿಬ್ಬರಿಗೂ ಅಂಜನಹಾಕಿದೆ. ಅದರಂತೆ ಉಭ ಯರೂ ಮಾರ್ಪಡಿಸಿಕೊಳ್ಳುವುದೇ ಸಾಳಿನ ಜಗತ್ತಿನ ಕೆಲಸ. ಲೌಕಿಕವನ್ನು ಭಾರತೀಯರೂ, ಆತ್ಮಿಕವನ್ನು ಐರೋಪ್ಯರೂ ಇಂದು ಮನಗಾಣಬೇಕಾಗಿದೆ. ಆ ಕೆಲಸವು ಅವ್ಯಾಹತವಾಗಿ ಸಾಗಿದೆ. ಭಾರತವು ಪರಿಪೂರ್ಣವಾಗುವುದ ರಲ್ಲಿದೆ. ಈ ಗಲಬಿಲಿಗಳೂ, ಅಸ್ತವ್ಯಸ್ತತೆಗಳೂ ಆದರಲ್ಲಿ ನಡೆದ 'ಕಾಮ ಗಿರಿ'ಯ ಲಕ್ಷಣಗಳೇ ಸರಿ. ಹಿಂದು ಧರ್ಮವು ಹಲವು ಮತ ಪಂಥಗಳ ಆಗರ. ಪ್ರತ್ಯೇಕ ಮತದಲ್ಲಿ ಅದರ ಪ್ರವರ್ತಕರೂ ಆಚಾರ್ಯರೂ ಆನು ಭಾವಿಗಳಾಗಿ ಆ ಆ ಮತದ ಸತ್ಯತೆಯನ್ನು ಮನಗಂಡಿದ್ದಾರೆ. ಆದರೆ ಅವೆಲ್ಲವೂ 'ತಮ್ಮದು ತಮಗೇ ಸರಿ' ಯೆನ್ನುವ ಮಟ್ಟಿಗೇ ನಿಂತಿದ್ದವು. ಪ್ರವರ್ತಕ—ಆಚಾರ್ಯರ ಮೇಲಿನ ಶ್ರದ್ಧೆಯಲ್ಲಿಯೇ ಅವೆಲ್ಲ ಮತಗಳು ಜೀವಹಿಡಿದುಕೊಂಡು ಕುಳಿತಿದ್ದವು. ಆದರೆ ಅವೆಲ್ಲವೂ ಸರಿಯೆಂದೂ, ಪ್ರತಿಯೊಂದು ದೇವನನ್ನು ಸೇರುವ ಮಾರ್ಗವೆಂದೂ ಬಗೆದು ಸಾಧ ನೆಯಿಂದ ಅನುಭವಗೊಂಡವರು ಶ್ರೀರಾಮಕೃಷ್ಣ ಪರಮಹಂಸರು. ರಾಮಕೃಷ್ಣರು ದ್ವೈತ-ಅದ್ವೈತಗಳಲ್ಲಿ ಸಾಧನೆ ಮಾಡಿ ಸತ್ಯವನ್ನು ಸಾಕ್ಷಾತ್ಕರಿಸಿಕೊಂಡರು. ರಾಧಾಭಾವದಿಂದ ಕೃಷ್ಣನನ್ನೂ, ಹನುಮನ ಭಾವದಿಂದ ಸೀತಾದೇವಿಯನ್ನೂ ಕಂಡುಕೊಂಡರು.

ಹನುಮಂತ ಭಾವದಿಂದ ಸಾಧನೆ ಮಾಡುತ್ತಿರುವಾಗ ಬಾಲವು ಮೊಳೆಯ ಹತ್ತಿತ್ತೆಂದೂ ರಾಧಾಭಾವದ ಸಾಧನದಲ್ಲಿದ್ದಾಗ ಸ್ತ್ರೀಯರಂತೆ ಮಾಸಿಕವು ಪ್ರಾರಂಭಿಸಿತ್ತೆಂದೂ ಅವರು ಹೇಳಿದ್ದನ್ನು ಕೇಳಿದರೆ ಒಮ್ಮೆಲೆ ನಂಬಿಗೆ ಯಾಗಲಿಕ್ಕಿಲ್ಲ. ಮಹಾಕಾಲಿಮೂರ್ತಿಯು ಇದ್ದುದೇ ನಿಜವಿದ್ದರೆ ತಮಗೆ ಅದರ ಪ್ರತೀತಿಯಾಗಲೆಂದು, ಮೂರ್ತಿಯ ಮೂಗಿನ ಮುಂದೆ ನೂಲೆಳೆ ಯನ್ನು ಹಿಡಿದಾಗ ಅದು ದೇವಿಯ ಸುಯಿಲಿನಿಂದ ಅಲುಗಾಡಿತಂತೆ! ಇಷ್ಟೆಲ್ಲ ಅನುಭವಗಳು ಕಾಕತಾಲಿನ್ಯಾಯದಂತೆ ತಮಗೊಬ್ಬರಿಗೇ ಘಟಿಸಿಲ್ಲ— ನಿಮಗೂ ಬೇಕಿದ್ದರೆ ಅನುಭವ ಪಡೆಯಿರೆಂದೂ, ಈ ಕಟ್ಟ ಕಲಿಯುಗದಲ್ಲಿ ಸಹದೇವನನ್ನು ಪಡೆಯಲಿಕ್ಕೆ ಒಂದು ದಿವಸ ಮಾತ್ರ ಸಾಕೆಂದೂ, ಕೈಯೆತ್ತಿ ಕೂಗಿ ಜಗತ್ತನ್ನು ಕರೆದ ರಾಮಕೃಷ್ಣರ ಸರ್ವಾನು ಭಾವಗಳಿಂದ ಪಾಶ್ಚಾತ್ಯರಲ್ಲಿ ನಂಬಿಗೆ ಹುಟ್ಟಲಿಕ್ಕೆ ಕಾರಣವಾಯಿತಲ್ಲದೆ ಭಾರತದ ಭಿನ್ನ ಮತದವರಲ್ಲಿ ಕಲಹಕ್ಕೆ ಕಾರಣವಾದ "ನಿಮ್ಮದು ಸುಳ್ಳು ನಮ್ಮದೇ ಸತ್ಯ"ವೆನ್ನುವ ಕುರುಡುಛಲವು ಅಳಿದು, ಎಲ್ಲ ಧರ್ಮಗಳೂ ಸತ್ಯವೆಂದೂ ಎಲ್ಲರೂ ತಂತಮ್ಮ ಧರ್ಮದಂತೆಯೇ ಸಾಗಲೆಂದೂ ಹೇಳುವ ಸಹಾನುಭೂತಿಯನ್ನು ಹುಟ್ಟಿಸಿತು. ರಾಮಕೃಷ್ಣರ ಜೀವನವು ಜಗತ್ತಿಗೆ ಬಹು ಘನವಾದ ಕಲ್ಯಾಣ ಮಾಡಿತು. ಅನೇಕ ಜನ್ಮಗಳಲ್ಲಿ ಮಾಡಿದರೂ ತೀರದ ಕಾರ್ಯವನ್ನು ಒಂದೇ ಜನ್ಮದಲ್ಲಿಯೇ ಸಾಧಿಸಿದರೂ, ಅವರ ಶರೀರವು "ಸತ್ಯಸಾಕ್ಷಾತ್ಕಾರ" ಮಾಡಿಕೊಂಡಿತು. ಅದನ್ನು ಜಗತ್ತಿನಲ್ಲಿ ಡಂಗುರಿಸುವುದಕ್ಕೆ ಇನ್ನೊಂದು ದಿವ್ಯಶರೀರವು ಬೇಕಿತ್ತು. ಅದನ್ನು ಪಡೆದು ಪುನಃ ಹುಟ್ಟಿಬರಲು ಸಮಯವಿರಲಿಲ್ಲ. ನರೇಂದ್ರನಿಗೆ ಅಂಥ ಶರೀರವಿತ್ತು. ಆ ಶರೀರವು ಅಂಥ ಅದ್ಭುತಶಕ್ತಿಯನ್ನು ಧರಿಸಲು ತಕ್ಕುದಾಗಿತ್ತು. ಪರಮ ಹಂಸರು ತಮ್ಮ ದಿವ್ಯಶಕ್ತಿಗಳನ್ನೆಲ್ಲ ಆತನಿಗೆ ಮನಗಾಣಿಸಿಕೊಟ್ಟರು; ದಾನವಾಗಿತ್ತರು. ಆಗ ನರೇಂದ್ರನಿಗೆ ಪುನರ್ಜನ್ಮವಾಯಿತು. ಅವನು ಯುಗಾಚಾರ್ಯ ವಿವೇಕಾನಂದನಾದನು. ಕಲಿತ ಪಾಶ್ಚಾತ್ಯವಿದ್ಯೆಯು, ಗುರುವಿತ್ತ ಜ್ಞಾನವನ್ನು ಪಾಶ್ಚಾತ್ಯರಲ್ಲಿ ಹರಿಬಿಡಲು ಸಾಧನವಾಯಿತು. "ಭಾರತವು ಧರ್ಮಗಳ ದೇಶ; ಧರ್ಮಗಳೆಲ್ಲ ಸತ್ಯ; ಸತ್ಯಗಳಲ್ಲಿ ಒಡಕು ಏಕೆ? ಧರ್ಮವನ್ನು ಪಾಶ್ಚಾತ್ಯರು ಕಲಿಯುಲಿ; ಭಾರತವು ಇಂದು ದಲಿತ

ರಾಷ್ಟ್ರವಾದರೂ ಆತ್ಮಜ್ಞಾನವನ್ನು ಹೇಳಿಕೊಡಲು ಅದೇ ಸಮರ್ಥವಾಗಿದೆ, ಅದರ ಅಂತರಂಗವು ಬಲಿಷ್ಠವಾಗಿದೆ. ಅದರ ಬಾಹ್ಯ ಶರೀರವನ್ನು ಪಾಶ್ಚಾತ್ಯ ಚಿಕಿತ್ಸೆಗಳಿಂದ ದೃಢಗೊಳಿಸಿ ಪ್ರತ್ಯುಪಕಾರ ಮಾಡಿರಿ" ಎಂದು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಗುಡುಗಿ, ಮಠಗಳನ್ನು ಸ್ಥಾಪಿಸಿ ಭಾರತದ ಧರ್ಮಧ್ವಜವನ್ನೇರಿಸಿ ಮರಳಿದನು.

ಇಂಥವನೇ ಇನ್ನೊಬ್ಬ ಸದವೀಧರನು ತನ್ನ ಆತ್ಮತೇಜವನ್ನು ಅಮೇರಿಕೆ ಜಪಾನಗಳಲ್ಲಿ ಬೆಳಗಿಸಿ ಬಂದನು. ಅವನ ಹೆಸರು ರಾಮತೀರ್ಥ ವಿವೇಕಾನಂದನು ಸನ್ಯಾಸಿಯಾದ ಸ್ವಾಮಿಯಾದರೆ, ರಾಮತೀರ್ಥನು ಸಂಸಾರಿಯಾದ ಸ್ವಾಮಿ. ವಿವೇಕಾನಂದನು ಹುಟ್ಟಿದ ಕೂಡಲೇ ಹುಲಿಗೆಜೆ ಕಟ್ಟಿದ ಕಲಿಯು. ರಾಮತೀರ್ಥನು ಕೆಲವು ಕಾಲ ಪ್ರಾಧ್ಯಾಪಕನಾಗಿದ್ದನ್ನು ವಿವೇಕಾನಂದನ ವಿಚಾರಗಳು ಭಾರತೀಯರನ್ನೂ ಐರೋಪ್ಯರನ್ನೂ ತಲೆದೂಗಿಸಿದರೆ, ರಾಮತೀರ್ಥನ ಭಾವಲಹರಿಗಳು ಅವರನ್ನು ರಸಗಂಗೆ ಯಲ್ಲಿ ಮಿಾಯಿಸಿ ಎದೆ ತುಂಬಿಸಿದವು. ಹೀಗೆ ಭಾರತವು ತನ್ನ ತಾನರಿತು ದಲ್ಲದೆ, ಪ್ರಖರ ವಿಮರ್ಶಕರಾದ ಪಾಶ್ಚಾತ್ಯರ ಕೂಲಂಕಷ ಬೌದ್ಧಿಕ ಒರೆಗ ಲ್ಲಿಗೆ ಹದಿನಾರಾಣೆ ಬಣ್ಣವಿಳಿಯುವಂತೆ ಪ್ರಯತ್ನವನ್ನು ಮಾಡಿತು. ಜಗತ್ತಿನ ಜನಸಂಖ್ಯೆಯಲ್ಲಿ ಐದರಲ್ಲೊಂದು ಭಾಗವಾದ ಭಾರತಕ್ಕೂ ಧರ್ಮವೊಂದಿದೆಯೆಂದು ಸಹ ಅರಿಯದ ಅಮೇರಿಕೆಯ ಸರ್ವಧರ್ಮಸಮ್ಮೇ ಳನಕ್ಕೆ ಅನಾಮಂತ್ರಿತ ಪ್ರತಿನಿಧಿಯಾಗಿ ಹೋದ ವಿವೇಕಾನಂದನು ತನ್ನ ತೇಜದಿಂದಲೂ, ದಿವ್ಯಜ್ಞಾನದಿಂದಲೂ, ಅಗಾಧವಾದ ವಾಕ್ಚಾತುರ್ಯ ದಿಂದಲೂ, ಅದ್ವಿತೀಯ ವ್ಯಕ್ತಿತ್ವದಿಂದಲೂ ಸರ್ವರ ಮನಸ್ಸನ್ನು ಸೆಳೆದನು. ಮನಗಳ್ಳನಾದ ಆತನನ್ನು ತಮ್ಮ ಪ್ರೇಮದ ರಜ್ಜುವಿನಿಂದ ಕಟ್ಟಿಹಾಕಿ, ಅನೇಕವರುಷ ಅಲ್ಲಿಯೆ ಇರುವಂತೆ ಅಲ್ಲಿಯ ಜನರು ಮಾಡಿದರು. ಅಲ್ಲಲ್ಲಿ ಅಂಟಿಸಿದ ವಿವೇಕಾನಂದನ ಭಿತ್ತಿಚಿತ್ರಗಳ ಮುಂದೆ ಹಾದಿಹಿಡಿದು ಸಾಗುವ ಪ್ರತಿಯೊಬ್ಬ ಅಮೇರಿಕನ್ನನು, ತಲೆಯಮೇಲಿನ ಟೊಪ್ಪಿಗೆ ತೆಗೆದು ತಲೆವಾಗಿಸಿ ಹೋಗುತ್ತಿದ್ದನಂತೆ. ಇದೇನು ಸಾಮಾನ್ಯ ಯಶಸ್ಸೇ? ಸ್ಥಾಯಿಕ ಮೂರ್ತಿಯಾದ ರಾಮಕೃಷ್ಣರು, ಉತ್ಸವ ಮೂರ್ತಿಯಾದ ವಿವೇಕಾನಂದರಿಗೆ ಹೋದಲ್ಲೆಲ್ಲ ಅಲೌಕಿಕವಾದ ಶಕ್ತಿ-ಜ್ಞಾನಗಳನ್ನು ಒದಗಿಸುತ್ತಿದ್ದರಂತೆ. ಅಂತೆಯೇ ಆ ಉತ್ಸವಮೂರ್ತಿಯು ಭೂತವರ್ತಮಾನಗಳನ್ನು ಜೀರ್ಣೋ

ಡ್ಢಾರ ಮಾಡಿ ಜೋಪಾಸನೆ ಮಾಡುವ ನಿರ್ದಾಕ್ಷಿಣ್ಯ ನಡತೆಯ ಪ್ರಮುಖ ಮೂರ್ತಿಯೆಂದೂ, ಅತಿ ಪ್ರಬಲ ಪ್ರತಿಪಾದಕನೆಂದೂ ಶ್ರೀ ಅರವಿಂದರಂತ ಹರಿಂದ ಹೊಗಳಿಸಿಕೊಂಡಿದ್ದಾನೆ.

ಭಾರತವು ನಾಳೆ ಗಳಿಸಬಹುದಾದ ಸ್ಥಾನಕ್ಕೆ ತಕ್ಕಂತೆ ಸರ್ವಶಕ್ತಿಗಳನ್ನು ಬೆಳೆಸಿ, ಸರ್ವಲೋಪಗಳನ್ನು ಅಳಿಸಿ, ಕುಂದುಗಳನ್ನು ಕಳೆದು ಪರಿಪೂರ್ಣವಾಗಬೇಕಾಗಿದೆ. ಹಾಗೂ ಸರ್ವಾಂಗಸುಂದರವಾಗಬೇಕಾಗಿದೆ—ಅಲ್ಲವೇ ? ಹಿಂದು ಸಮಾಜಕ್ಕೆ ಅತ್ಯಂತ ಕಲಂಕಪ್ರಾಯವೂ ಕ್ರೂರವೂ ಎನಿಸುವ ಪದ್ಧತಿಗಳಲ್ಲಿ ಸಹಗಮನವು ಒಂದು. ರಾಜಾರಾಮ ಮೋಹನ-ರಾಯನು ಚಿಕ್ಕವನಾಗಿದ್ದಾಗಲೇ, ಅಣ್ಣನು ತೀರಿಕೊಳ್ಳಲು ಅವನೊಡನೆ ಅತ್ತಿಗೆಯನ್ನೂ ಬಲ್ಮೆಯಿಂದ ಎಳೆದುತಂದು ಅಗ್ನಿಯಲ್ಲಿ ಒಗೆಯುತ್ತಿರುವುದನ್ನೂ, ಆ ಚಿಕ್ಕವಯಸ್ಸಿನ ಬಾಲಿಕೆಯು ಅಗ್ನಿಯಿಂದ ತಪ್ಪಿಸಿಕೊಂಡು ಜೀವವುಳಿಸಿಕೊಳ್ಳಲು ಓಡಿ ಹೋದರೂ ಹಿಡಿತಂದು ಮತ್ತೆ ಒಗೆಯುತ್ತಿರುವುದನ್ನೂ, ಆಕೆಯ ಆರ್ತಸ್ವರವು ಕೇಳಿಸಬಾರದೆಂದು ದೊಡ್ಡದೊಡ್ಡ ಚರ್ಮವಾದ್ಯಗಳನ್ನು ಬಡೆಯುತ್ತಿದ್ದುದನ್ನೂ ಎಳೆವಯಸ್ಸಿನ ರಾಮ-ಮೋಹನನ ಮನಸ್ಸಿನ ಮೇಲೆ ತೀರ ಕೆಟ್ಟ ಪರಿಣಾಮವನ್ನುಂಟು ಮಾಡಿತು. ಆಗಲೇ ಆ ತೇಜಸ್ವಿಯಾದ ಬಾಲಕನು ಮನಸ್ಸಿನಲ್ಲಿ ನಿಶ್ಚಯಮಾಡಿದ್ದೇನಂದರೆ— “ ನನ್ನ ಇಡಿಯ ಜೀವಮಾನದಲ್ಲಿ ಇದೊಂದು ಕ್ರೂರಪದ್ಧತಿಯನ್ನು ಎಷ್ಟು ವಿಘ್ನಗಳು ಬಂದರೂ ನಿರ್ಮೂಲ ಮಾಡಿಯೇ ಬಿಡುವೆನು.” ತಾನು ಗಟ್ಟಿಮಾಡಿದಂತೆ, ಪ್ರೌಢಾವಸ್ಥೆಗೆ ಬಂದಾಗ ಲೇಖನ ವ್ಯಾಖ್ಯಾನಗಳಿಂದ ಜನತೆಯ ಮನವನ್ನು ಒಲಿಸಿ, ತನ್ನ ಕೆಲಸಕ್ಕೆ ಒಪ್ಪಿಗೆಯನ್ನು ಪಡೆಯುವ ಪ್ರಯತ್ನ ಮಾಡಿದನು. ಆದರೆ ಅದರಿಂದ ಜನವಿರೋಧವೇ ಪ್ರಾಪ್ತವಾಯಿತಲ್ಲದೆ ಯಶಸ್ಸು ಸಿಗಲಿಲ್ಲ. ಇಂಥ ಕೆಲಸಗಳು ಕಾನೂನಿನ ಸಹಾಯದಿಂದಲೇ ಸಿದ್ಧಿಸತಕ್ಕವೆಂದು ಭಾವಿಸಿ, ಸರ್ಕಾರದವರಲ್ಲಿ ತನ್ನ ವಿಚಾರವನ್ನು ಅರಿಕೆ ಮಾಡಿಕೊಂಡು, ಆಗಿನ ವೈಸರಾಯನಾದ ವಿಲಿಯಮ್ ಬೆಂಟಿಂಕನ ಬೆಂಬಲವನ್ನು ಗಳಿಸಿದನು. ಇದಕ್ಕಾಗಿ ಇಂಗ್ಲಂಡ ಪ್ರವಾಸವನ್ನು ಸಹ ಕೈಕೊಂಡು ಅಲ್ಲಿ ಪಾರ್ಲಿಮೆಂಟಿನ ಸಹಾನುಭೂತಿಯನ್ನು ಪಡೆದುಕೊಂಡು ಬಂದನೆಂದೂ ಹೇಳುತ್ತಾರೆ. ಅಂತು ವಿಲಿಯಂಬೆಂಟಿಂಕ ದೊರೆಯು ಒಂದು

ಕಟ್ಟಳೆಯನ್ನೇರ್ಪಡಿಸಿ ಸಹಗಮನ ಪದ್ಧತಿಯನ್ನು ನಿಲ್ಲಿಸಿಬಿಟ್ಟನು. ಇದರಿಂದ ಪ್ರಾಚೀನ ಸಂಪ್ರದಾಯದವರಿಗೆ ತತ್ಕಾಲಕ್ಕೆ ಅಸಹ್ಯವೆನಿಸಿದರೂ ಹಿಂದೂಸಮಾಜದ ಒಂದು ನಿಂದ್ಯ ಪದ್ಧತಿಯನ್ನು ಕಿತ್ತೊಗೆದಿದ್ದು, ಅಸಾಧ್ಯ ರೋಗದಿಂದ ಉಳಿದುಕೊಂಡಂತೆ ತೋರಿದ್ದರಲ್ಲಿ ಆಶ್ಚರ್ಯವೇನು? ಈ ಮೊದಲು ಮುನ್ನೂರುವರುಷಗಳ ಹಿಂದೆ ಅಕಬರ ಬಾದಶಹನು ಈ ವಿಷಯದಲ್ಲಿ ಪ್ರಯತ್ನಿಸಿದ್ದುದರ ಫಲವು ಈಗ ದೊರೆಯಿತು.

ಅರ್ಧದಿಗಂಬರನಾದ ಈಶ್ವರಚಂದ್ರವಿದ್ಯಾಸಾಗರನು ಪ್ರಯತ್ನಿಸಿ, ತೊಡೆದುಹಾಕಿದ ಕೊಳೆಯೆಂದರೆ—ವಿಧವಾ ವಿವಾಹವು ಧರ್ಮಬಾಹಿರವೆಂಬ ಕಲ್ಪನೆಯನ್ನು "ಬಹು ಮಂದಿಮಡದಿಯರಃ ಪುರುಷ ತಾನೊಂದುತಿರೆ ವಿಧವೆ ತಾಂ ವಹ್ನಿಯೊಳು ಬೀಳಲೇಕೆ?" ಎಂಬ ರಾಜಾ ರಾಮಮೋಹನ ರಾಯನ ಪ್ರಶ್ನೆಯನ್ನೇ ಎತ್ತಿಹಿಡಿದು ಲೇಖನ ಭಾಷಣಗಳಿಂದ ಜನರ ಹೃದಯ ಪರಿವರ್ತನೆಯ ಸಲುವಾಗಿ ದೀರ್ಘವಾಗಿ ಶ್ರಮಿಸಿದನು. ಪರದೇಶ ಗಮನದಿಂದ ಕುಲವುಕೆಡುತ್ತದೆಂದೂ, ಅದಕ್ಕಾಗಿ ಅದೆಂಥ ವಿದ್ಯಾಸಂಪತ್ತು ಲಭಿಸಿದರೂ ಸಮುದ್ರ ಸಂಚಾರ ಕೂಡದೆಂದೂ ಆಗಿನಕಾಲದಲ್ಲಿ ಜನತೆಯು ಬಲವಾಗಿ ವಿರೋಧಿಸುವುದನ್ನು ಅಲ್ಲಗಳೆದು,ಐರೋಪ್ಯಮಾರ್ಗವನ್ನು ಸುಗಮಗೊಳಿಸಿದವರಲ್ಲಿ ರಾಮಮೋಹನನೂ ಈಶ್ವರಚಂದ್ರನೂ ಮುಖ್ಯರಾಗಿದ್ದಾರೆ. ಬ್ರಾಹ್ಮಣರ ಹೊರತು ಉಳಿದವರು ಸಂಸ್ಕೃತವನ್ನು ಕಲಿಯಬಾರದೆನ್ನುವ ಛಲವು ಲಜ್ಜಾಸ್ಪದವೆಂದು ಈಶ್ವರಚಂದ್ರನು ಅರಿತು ಕೆಲವು ಸಂಸ್ಕೃತ ವಿದ್ಯಾಲಯಗಳನ್ನು ತೆರೆದು ದಲಿತವರ್ಗದವರ ವರೆಗಿನ ಜನರಿಗೆ ಸಂಸ್ಕೃತ ವಿದ್ಯಾಭ್ಯಾಸಕ್ಕೆ ದಾರಿಯನ್ನೂ ಅನುಕೂಲತೆಯನ್ನೂ ಮಾಡಿಕೊಟ್ಟನು. ವಿವೇಕಾನಂದನು ದಲಿತವರ್ಗದವರಿಗೆ ಗಾಯತ್ರೀಮಂತ್ರವನ್ನು ಬೋಧಿಸಿ ಜನಿವಾರವನ್ನು ಅವರ ಕೊರಲಿಗಿರಿಸಿ ಅವರನ್ನು ಪುನೀತರನ್ನಾಗಿ ಮಾಡುವ ದಾರಿಯನ್ನು ತೋರಿಸಿದನು. ಕ್ರಿಸ್ತೀಧರ್ಮಪ್ರಚಾರದಿಂದಲೂ, ಮಹಮ್ಮದಿಯರ ಪ್ರಯತ್ನದಿಂದಲೂ ಕೆಲಮಟ್ಟಿಗೆ ಕರಗಿದ ಹಿಂದುಗಳು ಪುನಃ ಹಿಂದುಧರ್ಮದಲ್ಲಿ ಪ್ರವೇಶಿಸಲು ಅನುಕೂಲವಿಲ್ಲದ್ದರಿಂದ ಪಶ್ಚಾತ್ತಾಪಪಡುತ್ತ ಜೀವನವನ್ನು ಹೇಗೋ ನೂಕುತ್ತಿದ್ದರು. ಹಿಂದುಧರ್ಮದ ಕೋಟೆಗಿದ್ದ ದ್ವಾರವು ಹೊರಗೆ ಹೋಗಲಿಕ್ಕೆ ಮಾತ್ರ ಬರುತ್ತಿದ್ದಿತಲ್ಲದೆ, ಒಳಗೆ ಬರಲು ಆಸ್ಪದವಿರಲಿಲ್ಲ. ಇದರಿಂದ ತಾತ್ಕಾಲಿಕವಾಗಿ ಬಂದ

ಆವೇಶದಲ್ಲಿ ಕುಲಗೆಟ್ಟು ಹಿಂದಿನಿಂದ ಪಶ್ಚಾತ್ತಾಪ ಪಡುವವರಿಗೆ ಸಾಂತ್ವನಗೊಳಿಸುವ ಮಾರ್ಗವೇ ಇಲ್ಲದಂತಾಗಿತ್ತು. ಕ್ರಿಸ್ತಿ-ಮಹಮ್ಮದೀಯರ ಪ್ರಚಾರಕಾರ್ಯವು ಇನ್ನೊಂದೆಡೆ ಬುದ್ಧಿಪುರಸ್ಸರವಾಗಿ ಸಾಗಿದ್ದರಿಂದ, ಅದನ್ನು ಯುಕ್ತಿಪೂರ್ವಕವಾಗಿಯೇ ತಡೆಯುವುದು ತಕ್ಕುದೆಂದು ಯೋಚಿಸಿ, ಆರ್ಯಸಮಾಜವು ಅಂಥ ಕೆಲಸಕ್ಕೆ ನಡುಗಟ್ಟಿತು. ಕುಲಗೆಟ್ಟವರೂ ಬರಲಿ, ಕ್ರಿಸ್ತೀಮಹಮ್ಮದೀಯರೂ ಬರಲಿ, ಹಿಂದುಧರ್ಮವನ್ನು ಸ್ವೀಕರಿಸಬೇಕೆನ್ನುವವರೆಲ್ಲರೂ ಬರಲೆಂದು ಆಹ್ವಾನಿಸಿತು. ಐರೋಪ್ಯರು ವಿವೇಕಾನಂದರ ವ್ಯಾಖ್ಯಾನವನ್ನು ಕೇಳಿ, ತಮಗೆ ಹಿಂದುಧರ್ಮದ ದೀಕ್ಷೆಯನ್ನು ಕೊಡಿರೆಂದು ಅದೆಷ್ಟು ದುಂಬಾಲಬಿದ್ದರೂ — "ನಿಮ್ಮ ಧರ್ಮವೂ ಅಷ್ಟೇ ಸತ್ಯವಿದೆ. ಆಚರಿಸುವವರಿಗೆ ಅದೇ ಅತ್ಯಂತ ಉಜ್ವಲವಾಗಿದೆ" ಯೆಂದು ಬೋಧಿಸಿ ಅವರ ಮತಾಂತರ ಮಾಡಬೇಕೆನ್ನುವ ಬುದ್ಧಿಯನ್ನು ಹೋಗಲಾಡಿಸಿದುದನ್ನು ಮರೆತ ಕೆಲವು ಕ್ರಿಶ್ಚಿಯನ್ ಸಂಸ್ಥೆಗಳು ಭಾರತದಲ್ಲಿ ತಮ್ಮ ಪ್ರಚಾರಕಾರ್ಯವನ್ನು ನಡೆಸಿದ್ದರು. ಕ್ರಿಸ್ತಿ— ಮಹಮ್ಮದಿಯರ ಉಪದೇಶವು ಹಿಂದುಗಳಿಗೆ ಹೊಸದಲ್ಲವಾದರೂ ಆ ಧರ್ಮಗಳು ಹಿಂದು ಧರ್ಮಕ್ಕೆ ಅಂಗಗಳಾಗಿ ಹೊಂದಿಕೊಂಡಿರುವುದು ಅವಶ್ಯವೂ ಭೂಷಣವೂ ಆಗಿತ್ತು. ಆದರೆ ದಂಡಕೋಲು ಇಡಲಿಕ್ಕೆ ಸ್ಥಳಕೊಟ್ಟರೆ ಮಠವೆಲ್ಲಾ ತನ್ನದೇ ಅನ್ನುತ್ತಿದ್ದರಂತೆ! ಹಾಗೆ ಪ್ರಸಾರಕರು ತಮ್ಮದೇ ಪ್ರಸ್ಥವನ್ನು ಬೆಳೆಸಲಿಕ್ಕೆ ಬಂದಾಗ ಅದನ್ನು ತಡೆಗಟ್ಟುವುದು ನ್ಯಾಯ ಮಾರ್ಗವೇ ಆಗಿದೆ. ಪ್ರಸಾರವಿಲ್ಲದೆ ಅರಿತವನು — ವಿಚಾರ ಪೂರ್ವಕವಾಗಿ ಯಾವಧರ್ಮವನ್ನು ಸೇರಿದರೂ ಅಡ್ಡಿಯಿಲ್ಲ. ಅದು ಒಳ್ಳೆಯ ಜೀವಂತ ಲಕ್ಷಣವೇ ಸರಿ. ಆದರೆ ವಸ್ತುಸ್ಥಿತಿಯು ಇದಕ್ಕೆ ವಿರೋಧವಾಗಿತ್ತು.

ರಾಷ್ಟ್ರಸಭೆಯು ಜನ್ಮವೆತ್ತಿದ ಬಳಿಕ ಆ ಶಿಶುವು ಐರೋಪ್ಯ ಪದ್ಧತಿಯ ದಾದಿಯರಿಂದಲೇ ಪಾಲನ ಪೋಷಣಹೊಂದಿತು. ತಾರುಣ್ಯಾವಸ್ಥೆಗೆ ಬಂದ ಮೇಲೆಯೂ ವಿನಯ ಪ್ರೇಮಗಳಿಂದಲೇ ಅದು ತನ್ನ ಬೇಡಿಕೆಯನ್ನು ಸಾಧಿಸಿಕೊಳ್ಳಬೇಕೆಂಬ ತತ್ವವನ್ನೇ ಅವಲಂಬಿಸಿತು. ಹೀಗೆ ೨೦ ವರ್ಷ ಕಳೆದವು. ಅಷ್ಟರೊಳಗೆ ಮಹಾರಾಷ್ಟ್ರರ ಪುಣ್ಯ ನಗರದಲ್ಲಿ ತಿಲಕರ ಉದಯವಾಗಿ ಗಣೇಶೋತ್ಸವವು, ಶಿವಾಜಿ ಜಯಂತಿ ಇವು ಪ್ರಾರಂಭವಾದವು. ಅವು ಭಾರತ [illegible] ಧಾರ್ಮಿಕ ಹಾಗೂ ರಾಷ್ಟ್ರೀಯ ಉತ್ಸವಗಳಾಗಿ ಆ ಆ

ಬಗೆಯಲ್ಲಿ ಅದ್ಭುತ ಜಾಗ್ರತಿಯನ್ನುಂಟು ಮಾಡಿದವು. ಅಷ್ಟರಲ್ಲಿ ಭಾರತದ ರಸಶಾಲೆಯೆನಿಸುವ ಬಂಗಾಲವನ್ನು ಇಬ್ಭಾಗಿಸುವ ವಿಚಾರವು ಸರ್ಕಾರದ ಮನಸ್ಸಿನಲ್ಲಿ ಬಂದಿತು. ದೊಡ್ಡ ಇಲಾಖೆಯಾಗಿ ಉಳಿದರೆ ಆಡಳಿತಕ್ಕೆ ತೊಂದರೆಯೆಂದು ಅವರು ಹೇಳಿಕೊಳ್ಳುತ್ತಿದ್ದರು. ಆದರೆ ಆಡಳಿತದ ತೊಂದರೆ ತಪ್ಪಿಸಿಕೊಳ್ಳುವ ಭರದಲ್ಲಿ ಬಂಗಾಲದ ಪಂಚಪ್ರಾಣಗಳೇ ತೊಲಗುವವೆಂಬುದು ಅವರ ಲಕ್ಷ್ಯಕ್ಕೆ ಬರಲಿಲ್ಲವೇನೋ! ರಾಜ್ಯಾಂಗ, ಸಾಹಿತ್ಯ, ತತ್ವಜ್ಞಾನ ಸಮಾಜೋದ್ಧರಣೆ ಮೊದಲಾದ ಯಾವ ಬಾಬತ್ತಿನಲ್ಲಿಯೇ ನೋಡಲಿ, ಅದ್ಭುತವಾದ ವ್ಯಕ್ತಿಗಳು ಅಲ್ಲಿ ಜನ್ಮವೆತ್ತಿ ಬರುವುದು ಆಳರಸರಿಗೆ ಸಹನವಾಗಲಿಲ್ಲವೆಂದು ಕೆಲವರು ಊಹಿಸುತ್ತಾರೆ. ಅದು ನಿಜವಿರಲೂ ಬಹುದು. ತುಂಡರಿಸ ನಿಂತ ಲಾರ್ಡ ಕರ್ಜನನ ಸುಳಹಾಟಕ್ಕೆ ಬಡಿವೆಬ್ಬಿಸಿದಂತೆ ಚಂಗನೆ ಜಿಗಿದು ನಿಂತು, ಕೂಗಿ, ಬೊಬ್ಬೆಯಿಟ್ಟು ಆರ್ಭಟಿಸಿತು. ಆ ಗಲಬಿಲಿಗೆ ಇಡಿಯ ಭಾರತವೇ ಕಣ್ತೆರೆಯಿತು. ಐ. ಸಿ. ಎಸ್. ಪರೀಕ್ಷೆಯ ವಯೋಮಾನವನ್ನು ಸರಕಾರವು ಕಡಿಮೆ ಮಾಡಿದಾಗ ಸುರೇಂದ್ರನಾಥರು ಪಟ್ಟ ಪ್ರಯತ್ನಕ್ಕೆ ಅದು ಅಖಿಲ ಭಾರತೀಯ ಮೊದಲನೇ ಚಳವಳಿಯಾದಂತೆ ಅಖಿಲಭಾರತವು ಆಳರಸ ವಿರುದ್ಧವಾಗಿ ಪ್ರತಿಕಾರವನ್ನು ಮಾಡಲು ನಿಂತುದು ಇದೇ ಮೊದಲು. ಕರ್ಜನ ದೊರೆಗಳ ಪುಣ್ಯದಿಂದಲೇ ಅಖಿಲ ಭಾರತವು ಜಾಗ್ರತವಾಯ್ತೆನ್ನಬೇಕು. ಎಚ್ಚರಾದ ಜನರು ಹಲವು ವಿಧದ ಕಾರ್ಯಗಳಲ್ಲಿ ತತ್ಪರರಾಗುತ್ತಾರಷ್ಟೇ ? ಆಗ ರಾಷ್ಟ್ರದ ವಿವಿಧಾಂಗಗಳಲ್ಲಿ ನವಚೈತನ್ಯವು ಜಾಗ್ರತವಾಗಿದ್ದರಿಂದ ಕಲೆ, ಸಾಹಿತ್ಯ, ವಿಜ್ಞಾನ ಮುಂತಾದ ಎಲ್ಲ ಶಾಖೆಗಳಲ್ಲಿಯೂ ಚೈತನ್ಯ ಸಂಚಾರವಾಯಿತು. ಬಿನ್ನಹ ಬೇಡಿಕೆಗಳಿಂದ ಬೇಸತ್ತ ರಾಷ್ಟ್ರಕ್ಕೆ ವಂಗಭಂಗ ಪ್ರಸಂಗವು ಬಹಿಷ್ಕಾರ ಶಸ್ತ್ರವನ್ನು ಕೈಗಿತ್ತಿತು. ಎಚ್ಚತ್ತ ಜನರಲ್ಲಿ ಕೆಲವರು ಮೈಮುರಿಯುತ್ತ ವಿಚಾರಕ್ಕೆ ತೊಡಗಿದರು. ಹಲವರು ಏನಿದೆ ಗಾವಳಿಯೆಂದು ಕದತೆರೆದು ಮುಂದೆ ಓಡಿಯೆ ಬಿಟ್ಟರು. ವಿಚಾರಕ್ಕೆ ತೊಡಗಿದವರು ಮಂದಪಕ್ಷದವರೆಂದೂ, ಮುಂದೋಡಿದವರು ಕ್ರಾಂತಿಕಾರಕರೆಂದೂ ಕರೆಯಲ್ಪಟ್ಟರು. ವಿಚಾರವಿಲ್ಲದ ದುಡುಕೂ, ಕಾರ್ಯಕ್ಕಿಳಿಯದ ವಿಚಾರವೂ ಏತಕ್ಕೆ ಬರುವವು ? ಇವೆರಡು ಗುಣಗಳ ಸಮ್ಮೇಲನವಾದ ವೀರಪಕ್ಷವೊಂದು ತಲೆಯೆತ್ತುವುದು ಅನಿವಾರ್ಯ.

ಆ ವೀರಪಕ್ಷಕ್ಕೆ ಮುಂದಾಳುಗಳೂ ಮುಂದೆ ಬಂದರು. ಅವರೇ ಲೋಕ ಮಾನ್ಯರು. ಅದೇ ಹೊತ್ತಿಗೆ ಬಾಬು ಅರವಿಂದರು ಬಡೋದೆಯ ರಾಜ ಕಾರ್ಯವನ್ನು ಬಿಟ್ಟುಕೊಟ್ಟು ಬಂಗಾಲದ ಕಡೆಗೆ ಧಾವಿಸಿದರು. ಪತ್ರಿಕೆಗ ಳಿಂದಲೂ ಉಪನ್ಯಾಸಗಳಿಂದಲೂ ಜಾಗ್ರತಗೊಂಡ ಜನತೆಯು ರಾಷ್ಟ್ರದಾಜ್ಞೆ ಯನ್ನು ಮನ್ನಿಸಲು ಬದ್ಧಕಂಕಣವಾಯಿತು. ಸರಕಾರವು ಭಾರತವನ್ನು ಎಚ್ಚರಿಸುವ ಕರ್ತವ್ಯವನ್ನು ಮುಗಿಸಿ, ವಂಗಭಂಗದ ತನ್ನ ಧೋರಣವನ್ನು ಹಿಂತೆಗೆದುಕೊಂಡಿತು. ಧೋರಣೆ ಹಿಂತೆಗೆದುಕೊಂಡರೆ ಎಚ್ಚತ್ತಭಾರತವು ಮಲಗಿಕೊಳ್ಳುವದೇ ? ೧೯೦೬ರಲ್ಲಿ ಕಲಕತ್ತೆಯಲ್ಲಿ ಕೂಡಿದ ರಾಷ್ಟ್ರಸಭೆಗೆ ದಾದಾಭಾಯಿ ನವರೋಜಿಯವರು ಅಧ್ಯಕ್ಷರಾಗಿ, ತಮ್ಮ ಐವತ್ತು ವರು ಷಗಳ ರಾಜಕೀಯ ಜೀವನದ ಅನುಭವವನ್ನುಸುರಿ—" ಭಾರತದ ಸರ್ವ ರೋಗಗಳಿಗೆ ಸ್ವರಾಜ್ಯವೊಂದೇ ಉಪಾಯ " ಎಂದು ಸಾರಿದರು. ಸಾಮ್ರಾ ಜ್ಯಾಂತರ್ಗತ ಸ್ವರಾಜ್ಯವೇ ಭಾರತದ ಧ್ಯೇಯವೆಂದು ರಾಷ್ಟ್ರವು ನಿಶ್ಚಯಿಸಿತು. ಇಷ್ಟೆಲ್ಲ ಕೋಲಾಹಲಕ್ಕೆ ಕಾರಣರಾದ ತಿಲಕ-ಅರವಿಂದರನ್ನು ಸರಕಾರದವರು ಬಂಧಿಸಿ, ಅವೆಷ್ಟೊ ಆಪಾದನೆಗಳನ್ನು ಹೊರಿಸಲು ಪ್ರಯತ್ನಿಸಿದರು.ಅವುಗಳಲ್ಲಿ ಕೆಲವು ಸಾಧಿಸಿಯೂ ಬಿಟ್ಟವು. ತಿಲಕರೆಂದರೆ ನಾಲ್ವತ್ತು ವರುಷಗಳವರೆಗೆ ಅಖಂಡವಾಗಿ ಭಾರತಸೇವೆಗೆ ತೊಡಗಿ ನಿಂತು,ಸೆರೆಮನೆಯ ಸಹವಾಸವನ್ನೂ, ಅವೆಷ್ಟೋ ಶಾರೀರಿಕ ಪೀಡೆಗಳನ್ನೂ ಸಹಿಸಿಕೊಂಡು ನಿಂತ ಗಟ್ಟಿಗರಾದ ಮಹಾತ್ಯಾಗಿಗಳು. ಅವರ ಗಡಬಿಡಿಯಿಂದ ರಾಷ್ಟ್ರದ ತಾಮಸ ವೃತ್ತಿಯು ಕಳೆಯಿತು. ಗಾಂಧೀಜಿ ಅವರ ಮಾತಿನಲ್ಲಿ ಅವರು—"ಅರ್ವಾಚೀನ ಭಾರತದ ಜನಕರು." ಆಡಳಿತಗಾರರ ಭಾಷೆಯಲ್ಲಿ " ರಾಜ್ಯಕಾರಭಾರದ ಕರುಳಲ್ಲಿ ನಟ್ಟ ಮುಳ್ಳು " ಆದರೆ ಶ್ರೀ ಅರವಿಂದರೆನ್ನುವಂತೆ ಇಷ್ಟು ಮಾತ್ರ ನಿಜ. ಏನೆಂದರೆ—" ಭಾರತದ ಮುಂದಾಳುಗಳಲ್ಲಿ ಸ್ವದೇಶದ ಬಗ್ಗೆ ಇವ ರಷ್ಟು ದುಃಖಗಳನ್ನು ಸಹಿಸಿದವರು ಯಾರೂ ಇಲ್ಲ. ಇವರಲ್ಲಿ ಸ್ವಾರ್ಥ ತ್ಯಾಗವೂ ದುಃಖ ಸಹನಶಕ್ತಿಯೂ ಸ್ವಾಭಾವಿಕವಾಗಿರುವವೆಂದು ಯಾರೂ ತಿಳಿದಿರಲಿಲ್ಲ. "

" ಸ್ವರಾಜ್ಯವು ನಮ್ಮ ಜನ್ಮಸಿದ್ಧ ಹಕ್ಕು " ಎಂದು ಗುಡುಗಿ ಮಲಗಿದ ವರನ್ನು ಎಚ್ಚರಗೊಳಿಸಿ ತಿಲಕರು ಹಿಂದೆ ಸರಿದರು. ಇದರಿಂದ ಜನತೆಯು

ಬಲವು ಬೆಳೆದು, ಅವರಲ್ಲಿ ಆತ್ಮ ಬಲಿದಾನದ ಸಾಮರ್ಥ್ಯವುಂಟಾಯಿತು ; ರಾಷ್ಟ್ರಸೇವೆಯ ಹುಚ್ಚು ಹಿಡಿಯಿತು. ಸಂಕಟಗಳನ್ನು ಎದುರಿಸುವ ಸಂತೋಷ ವೃತ್ತಿಯು ವರ್ಧಿಸಿತು. ಸಂಪೂರ್ಣ ಸ್ವಾತಂತ್ರ್ಯವೇ ಭಾರತದ ಧ್ಯೇಯ ವೆಂದು ಶ್ರೀ ಅರವಿಂದರೂ ಬಿಪಿನಚಂದ್ರಪಾಲರೂ ಘೋಷಿಸಹತ್ತಿದರು. ಬಹಿಷ್ಕಾರದ ಬಿಸಿಯು ಸರಕಾರಕ್ಕೆ ತಗಲಲು ರಾಷ್ಟ್ರದ ಮುಖಂಡರನ್ನೆಲ್ಲ ಹಿಡಿದು ತುರಂಗಕ್ಕೆ ಅಟ್ಟಿದರು. ಏನೇ ಆದರೂ ಕೆಲವೊಂದು ಅಧಿಕಾರ ಗಳನ್ನಾದರೂ ಕೊಡದೆ ರಾಷ್ಟ್ರವು ಶಾಂತವಾಗಲಾರದೆಂದು ಸರಕಾರಕ್ಕೆ ಅನಿಸಿದ್ದರಿಂದ ಮಾರ್ಲೆ ಮಿಂಟೋ ಸುಧಾರಣೆಗಳು (೧೯೦೯) ಬಂದವು. ಮುಂದೆ ನಾಲ್ಕೈದು ವರುಷಗಳಮೇಲೆ ತಿಲಕರು ಸೆರೆಮನೆಯಿಂದ ಹೊರ ಬಂದಮೇಲೆ ಅವರು ಹೋಂ ರೂಲು ಚಳವಳಿಯನ್ನು ಹೂಡಿದರು. ಅದು ೨—೩ ವರುಷಗಳಲ್ಲಿ ಪರಮಾವಧಿಗೇರಿತು. ಹೊಸಹೊಸ ಆಕಾಂಕ್ಷೆ ಗಳು ರಾಷ್ಟ್ರದಲ್ಲಿ ಮುಖವೆತ್ತಿದವು. ಮಹಾಯುದ್ಧದಲ್ಲಿ ಸಹಾಯ ಮಾಡಿದ್ದರಿಂದ ಸ್ವಯಂನಿರ್ಣಯ ತತ್ವದಂತೆ ಸ್ವರಾಜ್ಯವು ಸಿಗಲೇಬೇಕೆಂದು ಭಾರತೀಯರು ಬಲವಾಗಿ ಬಯಸುತ್ತಿದ್ದರು. ಜನತೆಯಲ್ಲಿನ ಈ ವಿಲಕ್ಷಣ ಜಾಗ್ರತಿಯನ್ನು ಕಂಡು ಸರಕಾರವು ಬಂಡಾಯದ ಭೀತಿಯನ್ನು ಮುಂದೆ ಮಾಡಿ ರೌಲೇಟ ಕಾಯ್ದೆಯನ್ನು ಮಾಡಿತು. ಸ್ವಾತಂತ್ರ್ಯದ ಬದಲು ರೌಲೇಟ ಕಾಯ್ದೆಯ ಬಂಧನಗಳಿಂದ ಭಾರತೀಯರು ಮತ್ತೂ ಬಿಗಿಯಲ್ಪಟ್ಟರು. ಇಡಿಯ ರಾಷ್ಟ್ರವು ಕ್ಷುಬ್ಧವಾಗಿ ಎಲ್ಲಿ ನೋಡಿದಲ್ಲಿ ರೋಷಾಗ್ನಿಯು ಹೊರ ಹೊಮ್ಮಿತು. ಮ. ಗಾಂಧಿಯಂಥ ಸಾತ್ವಿಕರು ಸಹ ಸಿಡಿಮಿಡಿಗೊಂಡರು. ಸತ್ಯಾಗ್ರಹದ ಶಂಖವನ್ನೂದಿದರು. ವಂಗಭಂಗವು ತಿಲಕರನ್ನು ಕಾರ್ಯ ಪ್ರವೃತ್ತರನ್ನಾಗಿ ಮಾಡಿದಂತೆ ರೌಲೇಟಕಾಯ್ದೆಯು ಗಾಂಧೀಜಿಯವರನ್ನು ಬಯಲಿಗೆ ತಂದು ನಿಲ್ಲಿಸಿತು. ಇದೇಹೊತ್ತಿಗೆ ಖಿಲಾಫತ್ತಿನ ವಚನ ಭಂಗವು ಮಹಮ್ಮದಿಯರ ತಲೆತಿರುಗಿಸಿತು. ಪಂಜಾಬದ ಕೊಲೆಯಿಂದ ಭಾರತೀಯರ ಪಿತ್ತ ತಲೆಗೇರಿತು. ಇವೆಲ್ಲಕ್ಕೂ ಪರಮೋಪಾಯವೆಂದು ಅಸಹಕಾರವು ಕೈಕೊಳ್ಳಲ್ಪಟ್ಟಿತು. ರಾಷ್ಟ್ರಕ್ಕೆ ಮಹಾತ್ಮರು ನೇತ್ರವಾದರು. ಅಹಿಂಸೆಯು ಎಂತಹ ಬಲಿಷ್ಠ ಸರಕಾರವನ್ನಾದರೂ ಮಣಿಸಬಹುದೆಂಬ ಹೊಸ ಸಿದ್ಧಾಂತವು ವಿಶ್ವದ ರಾಜಕಾರಣದಲ್ಲಿ ರಾಜಿಸ ತೊಡಗಿತು. ತಿಲಕರೆ

ಉದಯದಿಂದ ರಾಜ್ಯಸೂತ್ರಗಳು ಶ್ರೀಮಂತ ಹಾಗೂ ಸರಕಾರದ ಕೈ ಬಿಟ್ಟಂತೆ, ಗಾಂಧೀಜಿಯವರ ಆಗಮನದಿಂದ ರಾಜ್ಯಸೂತ್ರಗಳು ಸಾಮಾನ್ಯರ ಕೈಸೇರಿದವು. ಭಾರತದ ನರ ನರಗಳೆಲ್ಲವೂ ಗಾಂಧೀಜಿಯ ಕೂಗಿಗೆ ಕಾರ್ಯಾ ಸಕ್ತವಾದವು. ಆಂದೋಲನವೂ ದಬ್ಬಾಳಿಕೆಯೂ ಬೆಂಕಿ ನೀರುಗಳ ಸಂಗಮ ದಂತಾಗಿ ವಡಬಾಗ್ನಿಯು ಪ್ರಜ್ವಲಿಸತೊಡಗಿತು. ದಬ್ಬಾಳಿಕೆಯೂ ಶಸ್ತ್ರಾ ಸ್ತ್ರಗಳೂ ಮಕ್ಕಳಾಟಿಕೆಗಳಾದವು; ಸೆರೆಮನೆಗಳು ವಿಶ್ರಾಂತಿಯ ಸ್ಥಾನಗಳಾ ದವು. ಹೊಸ ಸುಧಾರಣೆಗಳನ್ನೀಯಲು ಸೈಮನ್ ಕಮಿಶನ್ ಬರುವುದೆಂದು ಪ್ರಕಟವಾಯಿತು. ಆ ಕಮಿಶನ್ನಿಗೆ ಬಹಿಷ್ಕಾರ ಹಾಕಬೇಕೆಂದೂ ಸಂಪೂರ್ಣ ಸ್ವಾತಂತ್ರ್ಯವೇ ಹಿಂದೀರಾಷ್ಟ್ರದ ಧ್ಯೇಯವೆಂದೂ ಜವಹರಲಾಲರ ಮುಖ ದಿಂದ ರಾಷ್ಟ್ರವು ಉಚ್ಚರಿಸಿತು. ಸಂಪೂರ್ಣಸ್ವಾತಂತ್ರ್ಯವು ಧ್ಯೇಯವಾದ ಮೇಲೆ ಶಾಂತಿಮಯವಾದ ಕಾಯ್ದೆಭಂಗವೇ ಅದಕ್ಕೆ ಸಾಧನವಾಯಿತು. ಅದು ಭಾರತಕ್ಕೆ ಜಗತ್ತಿನ ಸ್ವತಂತ್ರರಾಷ್ಟ್ರಗಳಂತೆ ಆಚರಿಸುವ ಹಾಗೂ ಹೋರಾಡುವ ದೃಷ್ಟಿಯನ್ನು ಕೊಟ್ಟಿತು.

ಗಾಂಧಿ ಯುಗದಿಂದ ಭಾರತದಲ್ಲಿ ಸ್ಥಾಯಿಯಾದ ಬದಲಾ ವಣೆಗಳು ಬೇಕಾದಷ್ಟು ಆಗಿವೆ. ಅವುಗಳಲ್ಲಿ ಕೆಲವನ್ನು ನಿರೀಕ್ಷಿಸುವಾ. ಗಾಂಧೀಜಿ, ಬಡತನದ ಜೀವನವನ್ನು ಪ್ರೀತಿಪೂರ್ವಕವಾಗಿ ಆದರಿಸಿ ದ್ದರಿಂದ ರಾಷ್ಟ್ರವು ಅವರನ್ನು ಅನುಸರಿಸಿ ಸಾದಾತನಕ್ಕಿಳಿಯಿತು. ಗಾಂಧೀಜಿ ಬಡವರ ಉಡುಪಿನಲ್ಲಿಯೇ ಇಂಗ್ಲಂಡಿಗೂ ಹೋದರು. ಚಕ್ರವರ್ತಿಗಳನ್ನು ಕಂಡಿದ್ದೂ ಅದೇ ವೇಷದಲ್ಲಿ. ಅವರದು ಬರಿಯ ವೇಷ ವಾಗಿರದೆ ಅದಕ್ಕೆ ಅಂತರಂಗದ ಸಂಪೂರ್ಣ ಒಪ್ಪಿಗೆಯಿದ್ದುದರಿಂದ ಇಂಗ್ಲಂಡದ ಚಳಿಯು ಸಹ ಅವರ ಮೇಲೆ ಯಾವ ಪರಿಣಾಮವನ್ನು ಮಾಡಲಿಲ್ಲ. ಭಾರತವು ಪಾರತಂತ್ರ್ಯದೇಶವಷ್ಟೇ ಅಲ್ಲ, ಅದೊಂದು ಸೆರೆಮನೆ ಯೆಂದೂ, ಭಾರತೀಯರು ಸೆರೆಯಾಳುಗಳೆಂದೂ ರಾಷ್ಟ್ರಕ್ಕೆ ಅನಿಸಿದ್ದರಿಂದ ಗಾಂಧೀಜಿಯ ಮುಖಾಂತರವಾಗಿ ಬಿಳಿಟೊಪ್ಪಿಗೆ—ಒಂಟಿ ಅಂಗಿಗಳು ಬಳಕೆ ಯಲ್ಲಿ ಬಂದವು. ಆ ವೇಷವೇ ಭಾರತ ಸೇವಕನ ಬಿರುದಾಯಿತು. ತಿಲಕರ ಕಾಲಕ್ಕೆ ಸಿಕ್ಕ ಬಹಿಷ್ಕಾರ ಶಸ್ತ್ರವು ಯಶಸ್ವಿಯಾಗಿ ಉಪಯೋಗಿಸಲ್ಪಡ

ಬೇಕಾದರೆ, ಅದರ ಜೊತೆಗೆ ಸ್ವದೇಶೀ ಉದ್ಯೋಗಗಳು ತಲೆಯೆತ್ತ ಬೇಕೆಂದು ಅರಿಸಿಕೊಂಡುದರಲ್ಲಿ ಖಾದೀವ್ರತವೊಂದು ಅತ್ಯಂತ ಮುಖ್ಯವಾದದ್ದು. ರಾಷ್ಟ್ರಭಕ್ತನಾದವನು ಖಾದಿಯನ್ನು ಧರಿಸಲೇ ಬೇಕು. ರಾಷ್ಟ್ರಕ್ಕಾಗಿ ಸ್ವಾರ್ಥತ್ಯಾಗಮಾಡಿದರೂ ಸೆರೆಮನೆ ದಬ್ಬಾಳಿಕೆಗಳ ಕಷ್ಟಸಹಿಸಿದರೂ ಆದ ರಾಷ್ಟ್ರಸೇವಕರ ತೇಜವು ಖಾದಿಯ ವಸ್ತ್ರದಿಂದಲೂ ಟೊಪ್ಪಿಗೆ ಒಂಟಿಯಂಗಿಗಳಿಂದಲೂ ಮತ್ತಿಷ್ಟು ಥಳಥಳಿಸಿತು. ಟೊಪ್ಪಿಗೆ ಗಾಂಧಿ ಟೊಪ್ಪಿಗೆ ಅನಿಸಿತು; ಅಂಗಿ ನೆಹರು ಶರಟು ಅನಿಸಿತು. ಉಡಿಗೆ ತೊಡಿಗೆಗಳಲ್ಲಿ ಈ ಮಾರ್ಪಾಡು ಆಗಿರದಿದ್ದರೆ ಸುಶಿಕ್ಷಿತರಿಗೂ ಸಾಮಾನ್ಯಜನಕ್ಕೂ ವೇಷದಲ್ಲಿ ಅತ್ಯಂತ ಅಂತರವುಂಟಾಗಿ ಪರಸ್ಪರಸ್ನೇಹವಾಗಲಿ ಸಂಬಂಧವಾಗಲಿ ಉಂಟಾಗುವದು. ಬಿಗಿಯಾಗುತ್ತಿತ್ತು. ಗಾಂಧೀಯುಗವು ಐರೋಪ್ಯಾನುಕರಣದ ಉಡುತೊಡಿಗೆಗಳಿಗೆ ಪಂಗನಾಮ ಹಾಕಿಬಿಟ್ಟಿದ್ದರಿಂದ ಪದವೀಧರರೂ ಸುಶಿಕ್ಷಿತರೂ ನಮಗೆ ದೂರಿನವರಲ್ಲವೆಂದೂ ಅದೇಕೆ ನಮ್ಮವರೇ ಎಂದೂ ತಿಳಿದುಕೊಳ್ಳಲು ಹಳ್ಳಿಗರಿಗೂ ಹಗುರಾಯಿತು. ದಲಿತವರ್ಗದವರನ್ನು ಮುಟ್ಟಿಸಿಕೊಳ್ಳದೆ ಇರುವ ನಿಂದನೀಯ ಪದ್ಧತಿಯನ್ನು ತೊಡೆಯಲು ಬದ್ಧ ಕಂಕಣರಾಗಿ ನಿಂತವರಲ್ಲಿ ಜಗತ್ತಿನ ಇತಿಹಾಸದಲ್ಲಿ ಗಾಂಧಿಯವರು ಪ್ರಮುಖರೆನಿಸುವರು. ಭಾರತಸಮಾಜವು ಕೈಕೊಂಡ ಈ ಲಜ್ಜಾಸ್ಪದವಾದ ಆಚರಣೆಯನ್ನು ತೀವ್ರವಾಗಿ ತೊಡೆದು ಹಾಕದಿದ್ದರೆ ಜಗತ್ತಿನಲ್ಲಿ ನಮಗೆ ಸ್ಥಾನಮಾನಗಳೇ ಇಲ್ಲವೆಂದರು. ಅದಕ್ಕಾಗಿ ಗುಡಿಗುಂಡಾರಗಳಿಗೆ ಪ್ರವೇಶಾಧಿಕಾರವನ್ನು ಅವರಿಗೆ ಒದಗಿಸಿಕೊಟ್ಟರು. ದೊಡ್ಡದೊಡ್ಡ ಉಪವಾಸಮಾಡಿದರು ತಾವೂ ಹರಿಜನ ಎಂದು ಹೇಳಿಕೊಂಡರು. ರಾಷ್ಟ್ರಭಾಷೆಯ ಅವಶ್ಯಕತೆಯು ತೋರಿಬರಲು ಹಿಂದೀ ಭಾಷೆಗೆ ಆ ಪದವಿ ಸಿಕ್ಕಿತು ಸ್ತ್ರೀಯರಲ್ಲಿ ಸಂಜೀವನೀ ಶಕ್ತಿಯು ಸಂಚರಿಸಿತು ಭಾಷಾವಾರ ಪ್ರಾಂತರಚನೆಯ ತತ್ವಕ್ಕೂ ಪ್ರಯತ್ನಕ್ಕೂ ಮಾನ್ಯತೆ ಸಿಕ್ಕಿತು. ಅಹಿಂಸಾಚರಣೆಯನ್ನು ಧರ್ಮೋನ್ನತಿಗಾಗಿಯೂ ಆತ್ಮೋನ್ನತಿಗಾಗಿಯೂ ಆಚರಿಸಿದ್ದಲ್ಲದೇ ರಾಜಕಾರಣದಲ್ಲಿಯೂ ಬಳಸಿತೋರಿಸಿ ಅನ್ಯ ರಾಷ್ಟ್ರಗಳಿಗೂ ಮಹಾಯುದ್ಧದಲ್ಲಿ ಮಾನವ ಹತ್ಯಾ ಖಾಂಡವನ್ನು ನಡೆಯಿಸಿದ ದಾನವರಾಷ್ಟ್ರಗಳಿಗೂ ಅದೇ ಸಂದೇಶವನ್ನು ಸಾರುತ್ತ ಜೀವ ಮಾನವನ್ನು

ಮುಗಿಸಿದ ಅವರ ಧೈರ್ಯವನ್ನು ನೋಡಿದರೆ, ಅವರಲ್ಲಿ ಅಹಿಂಸೆಯು ಎಷ್ಟು ರಕ್ತಗತವಾಗಿ ಹೋಗಿತ್ತೆಂಬುದೂ, ಅದರ ಒಗೆಗೆ ಅದೆಂಥ ಆತ್ಮವಿಶ್ವಾಸವುಂಟಾಗಿತ್ತೆಂಬುದೂ ಕಂಡುಬರುವದು. ಹೀಗೆ ನೋಡಿದರೆ, ಅಹಿಂಸೆ ಹಾಗೂ ಗಾಂಧೀಜಿ ಅವರನ್ನು ವಿಂಗಡಿಸಿ ತೋರಿಸಲಿಕ್ಕೆ ಆಗದೆನ್ನಬಹುದು.

ಗಾಂಧಿ ಜಯಂತಿ ಅಲ್ಲ; ಖಾದಿ ಜಯಂತಿ ' ಅನ್ನಿರೆಂದು ಅವರೇ ಹೇಳುವುದರಿಂದ ಖಾದಿಯೇ ಗಾಂಧಿ; ಗಾಂಧಿಯೇ ಖಾದಿಯೆಂಬ ಮಾತನ್ನು ಅವರು ಒಪ್ಪಿಕೊಂಡಂತಾಯಿತು. ಸತ್ಯವು ಅವರ ಜೀವಾಳ; ಅವರ ಜೀವನದ ಗುರಿಯು ಸತ್ಯವು. ಆ ಸತ್ಯ ಸಾಕ್ಷಾತ್ಕಾರಕ್ಕೆ ಸತ್ಯಾಗ್ರಹವೇ ದಾರಿ; ಆ ದಾರಿಗೆ ಅಹಿಂಸೆಯು ಧರ್ಮ. ಈ ಬಗೆಯಾಗಿರುವ ವೈಯಕ್ತಿಕ ಧರ್ಮವನ್ನು ರಾಷ್ಟ್ರಕ್ಕೆ ತೊಡಿಸಿದ್ದರಿಂದ ಭಾರತಕ್ಕೆ ಅದೆಂತಹ ಸತ್ವ, ತೇಜ, ಯೋಗ್ಯತೆಗಳು ಬೆಳೆದು ಬಂದವು ! ಇಷ್ಟೇ ಅಲ್ಲ; " ಇದು ಸಾಕಾಗದು; ಇದಕ್ಕೂ ಮುಂದುವರಿಯುವಾ. ಅಂತರಂಗಕ್ಕಿಳಿಯುವಾ. ಆಳವನ್ನು ಅರಿಯುವಾ. ಅಜೇಯ ಶಕ್ತಿಯನ್ನು ಗಳಿಸುವಾ. ಅಜೇಯಶಕ್ತಿಯ ಉಗಮಸ್ಥಾನವನ್ನು ಕೈವಶ ಪಡಿಸಿಕೊಳ್ಳುವಾ. ಅದರೊಡನೆ ಬೆರೆತು ಒಂದಾಗುವಾ " ಎಂಬ ಆಶೆಯು ನವಭಾರತದ ನಾಡಿಯಲ್ಲಿ ಮಿಡಿಯತೊಡಗಿದುದನ್ನು ಮರೆಯಲಾಗದು.

# ಯುಗ ಪ್ರಭಾತ

ಭಾರತವು ಎಚ್ಚರಗೊಂಡಿದ್ದೇ ಐರೋಪ್ಯರ ತುಳಿಲಾಟದಿಂದ, ಎಚ್ಚರಿಕೆಯಾದ ಮೇಲೆ ಕಾಣಿಸಿದ್ದು ಐರೋಪ್ಯರ ವೇಷಭೂಷಣ; ಕೇಳಿಸಿದ್ದು ಅವರದೇ ಮಾತುಕತೆ; ಕಲಿತಿದ್ದು ಅವೇ ರೀತಿನೀತಿಗಳನ್ನು. ಭಾರತವು ಎಚ್ಚರಗೊಂಡಿತೇ ಹೊರತು ಅರಿವುಗೊಳ್ಳಲಿಲ್ಲ; ಪೂರ್ವದ ಸ್ಮರಣೆ ಬರಲಿಲ್ಲ. ರಾಷ್ಟ್ರೀಯ ಸಭೆಯಾಗಲಿ, ಬ್ರಹ್ಮಸಮಾಜ ಪ್ರಾರ್ಥನಾ ಸಮಾಜಗಳಾಗಲಿ ಜನ್ಮವೆತ್ತಿದ್ದು ಭಾರತದಲ್ಲಿ. ಅವನ್ನು ನಡೆಯಿಸಿಕೊಂಡು ಹೊರಟವರು ಭಾರತೀಯರು; ಸಲ್ಲ. ಆದರೆ ಅರ್ಧಶತಮಾನದ ಕಾಲಾವಧಿಯನ್ನು ಕಳೆದ ಭಾರತವು ಪ್ರಗತಿಪಥದಲ್ಲಿ ಮುಂದುವರಿದುದರ ಅಳತೆ ಹಾಕಿದರೆ, ಇದು ನಮ್ಮ ದಾರಿ ಅಹುದೋ ಅಲ್ಲವೋ ಎಂಬ ಸಂಶಯ ಬಾರದೆ ಹೋಗದು. ಶುದ್ಧ ಪಾಶ್ಚಾತ್ಯಾನುಕರಣದಲ್ಲಿ ರಾಷ್ಟ್ರಸಭೆಯು ಇಪ್ಪತ್ತು ವರುಷ ಹೆಜ್ಜೆಯಿಟ್ಟರೂ ಅರಿಕೆ, ಬೇಡಿಕೆ, ಪ್ರಾರ್ಥನೆ ಇವುಗಳಲ್ಲಿಯೇ ಅದರ ಮುಗಿತಾಯವಾಯಿತು. ವಂಗಭಂಗದ ಅರಿವು ತನ್ನತನವನ್ನು ಅದರಲ್ಲಿ ಹುಟ್ಟಿಸಿತಲ್ಲದೆ ಅದು ಭಾರತದ ಜೀವನಾಡಿಯ ಜಾಗ್ರತಿಯನ್ನೂ ಮಾಡಿತು. ಗಾಂಧೀಜಿ ಆಂದೋಲನವು ಇಪ್ಪತ್ತೇ ವರುಷಗಳಲ್ಲಿ ನೂರು ವರುಷಗಳಷ್ಟು ಮುಂದುವರಿಸಿದ ಬಂಗಾಲದ ಜೀವನಾಡಿಯ ಜಾಗ್ರತಿಯೆ ಕಾರಣವಾಗಿದೆ. ಆ ಮಿಸುಕಿನಲ್ಲಿ ಆಧ್ಯಾತ್ಮನಾಡಿಯು ತುಸು ಮಿಡಿಯಿತೆನ್ನಬೇಕು. ಈ ವಿಷಯದಲ್ಲಿ ಶ್ರೀ. ಅರವಿಂದರು ಅನ್ನುವದೇನಂದರೆ— "ಪಾಶ್ಚಿಮಾತ್ಯ ಶಿಕ್ಷಣವನ್ನು ಮೊದಲು ಪಡೆದು ಬುದ್ಧಿವಂತರೆಂದೆನಿಸಿಕೊಂಡ ಕೆಲಕೆಲವು (ಭಾರತೀಯ) ಜನರು ಮತಿವಂತರಾಗಿ ಹೊಸ ಕೆಲಸ ಮಾಡುವ ಹುಮ್ಮಸ್ಸಿನವರಾಗಿದ್ದರು. ಅವರು ಉದ್ದೇಶದಲ್ಲಿ ಜಾಜ್ವಲ್ಯ ದೇಶಾಭಿಮಾನಿಗಳಾಗಿದ್ದರೂ ಅವರ ಚಿತ್ತವೃತ್ತಿಯು ಅರಾಷ್ಟ್ರೀಯವಾಗಿತ್ತು. ನಮ್ಮ ಪ್ರಾಚೀನ ಸಂಸ್ಕೃತಿಯು ಅರ್ಧಮರ್ಧ ಸುಸಂಸ್ಕೃತವೆಂಬ ಪಾಶ್ಚಿಮಾತ್ಯರ ಮತವನ್ನು ಅವರು ಸ್ಪಷ್ಟಾಭಿಪ್ರಾಯದಲ್ಲಿ ಅಲ್ಲದಿದ್ದರೂ ವ್ಯವಹಾರತಃ ಒಪ್ಪಿಕೊಂಡಿದ್ದರು. ಅವರನ್ನಾಳುವ ಆದರ್ಶಗಳು ಪಡುವಣದವರ ಕೈಗಡ ಬದುಕು. ಅಥವಾ

ಏನಿಲ್ಲೆಂದರೂ ಅವರ ಸತ್ವತತ್ವಗಳನ್ನೊಳಗೊಂಡ ಶಿಕ್ಷಣ ಪ್ರಭಾವದಿಂದ ಪ್ರೇರಿತವಾಗಿದ್ದವು." ರಾಷ್ಟ್ರೀಯ ಕೆಲಸಗಾರರ ಮನಸ್ಸಿನ ತಳಹದಿಯೇ ಅರಾಷ್ಟ್ರೀಯವಾಗಿದ್ದ ಮೇಲೆ, ಅವರ ಕಾರ್ಯಪರಿಣಾಮವು ರಾಷ್ಟ್ರಪೋಷಕ ವಾಗುವ ಬಗೆ ಹೇಗೆ? ನಾಡಿ ಪರೀಕ್ಷೆ ಸರಿಯಾಗಿ ಆಗದಿದ್ದರೆ ಎಂಥ ಹೇಮಗರ್ಭಮಾತ್ರೆಗೂ ಆ ರೋಗವು ಹಣಿಯಲಾರದೆಂದೇ ಹೇಳಿದ ಹಾಗಾ ಯಿತು. "ಎಲ್ಲಿಯವರೆಗೆ ಭಾರತೀಯರು ತಮ್ಮ ಪೂರ್ವಿಕರ ಆದರ್ಶಗಳನ್ನು ಮರೆಯುವದಿಲ್ಲವೋ ಅಲ್ಲಿಯವರೆಗೆ ಅವರಿಗೆ ಸಾವಿನ ಭಯವಿಲ್ಲ"ಎಂದು ಹೇಳಿದ ವಿವೇಕಾನಂದರ ಮಾತು ಯಥಾರ್ಥವಾಗಿದೆ. ಹಾಗಾದರೆ ಐರೋಪ್ಯ ಸಂಬಂಧವು ನಮಗೇನೂ ಪ್ರಯೋಜನವೇ ಇಲ್ಲವೇ? ಇದೆ ತುಂಬಾ ಇದೆ. ಅವರಿಂದ ಕಲಿತುಕೊಳ್ಳತಕ್ಕ ಮಾತುಗಳು ಬೇಕಾದಷ್ಟಿವೆ. ಆದರೆ ಅವಕ್ಕೆ ಭಾರತೀಯ ದೀಕ್ಷೆ ಕೊಡಬೇಕಾಗುವದು. ಹಾಗೆ ಮಾಡಿದರೆ ಅವು ನಮ್ಮನಾಗಿ ಅವು ನಮಗೆ ಒಪ್ಪುವವು.

ಪ್ರಕೃತಿಕ ಸ್ವಾಭಾವಿಕವಲ್ಲದ ಮಾರ್ಗದಲ್ಲಿ, ಅಸ್ವಾಭಾವಿಕವಾದ ರೀತಿಯಲ್ಲಿ ಕರುಳು ಹರಿಯುವಂತೆ ಜಗ್ಗಾಡುವುದರಿಂದ ವ್ಯರ್ಥಶ್ರಮವೂ, ಶಕ್ತಿಯ ಅಪವ್ಯಯವೂ ಆಗುತ್ತದೆ ಅನುಕರಣವು ವ್ಯಕ್ತಿಗಷ್ಟೇ ಬೇಕೆಂದಲ್ಲ; ರಾಷ್ಟ್ರಕ್ಕೂ ಬೇಕು. ಆದರೆ ಅನುಕರಣ ಮಾಡುವವರು ತಮ್ಮ ಸ್ಥಾನ-ಯೋಗ್ಯತೆಗಳನ್ನು ಅರಿತಿರಬೇಕು. ಆಂಗ್ಲರು ಜಗತ್ತಿನಲ್ಲಿಯೇ ರಾಜ್ಯಾಂಗ ನಿಪುಣರು; ಚಾಣಾಕ್ಷರು; ಅವರ ಸಾಹಿತ್ಯವು ವಿಶ್ವಸಾಹಿತ್ಯವು; ಅವರ ಭಾಷೆ ಜಾಗತಿಕ ಭಾಷೆ ಎಂದ ಮಾತ್ರಕ್ಕೆ, ಅವರಂತೆ ಯಶಸ್ಸೂ, ಅವರಷ್ಟು ಪ್ರಗತಿಯೂ ಭಾರತೀಯರಿಗಾಗಬೇಕಾದರೆ, ಅವರಂತೆಯೇ ನಾವೂ ಸಾಗಬೇಕೆಂಬ ತ್ರೈರಾಶಿಕದ ಪದ್ಧತಿಯು ಇಲ್ಲಿ ಹೊಂದುಗೊಳ್ಳದು. "ಆಂಗ್ಲಮಯ ಭಾರತವು ಸಾಧ್ಯವೂ ಅಲ್ಲ; ಈಪ್ಸಿತವೂ ಅಲ್ಲ. ಅವರ ಹಾದಿಯನ್ನು ನಾವು ಹಿಡಿದರೆ, ತಿಣಕಿ ಅಣಕಿಸುವ ಕೊಡಂಗಿಗಳಾಗಿ, ಅಡ್ಡತಿಡ್ಡ ಅನುಯಾಯಿಗಳಂತೆ ಐರೋಪ್ಯರು ಎಡವಿದಲ್ಲಿ ಎಡವಿ, ಕುಂಟಿದಲ್ಲಿ ಕುಂಟಿ, ಬಿದ್ದಲ್ಲಿ ಬಿದ್ದು ತವಡರಿಸಿ ಮುಗ್ಗರಿಸಿ ಅವರಿಗಿಂತಲೂ ಯಾವಾಗಲೂ ಉತ್ಕ್ರಾಂತಿಪಥದಲ್ಲಿ ಅದು ನಮ್ಮನ್ನು ಅರ್ಧಶತಮಾನ ಹಿಂದೆಯೇ ಉಳಿಸುತ್ತಿತ್ತು" ಎಂಬ ಶ್ರೀ ಅರವಿಂದರ ಮಾತನಿಲ್ಲಿ ಸ್ಮರಿಸಿಕೊಳ್ಳತಕ್ಕದ್ದು. ಆಂಗ್ಲಾನುಕರಣವು ತಪ್ಪು

ಹೆಚ್ಚೆ. ಆವರೆ ಸ್ವಾಭಾವಿಕವಾದ ಆಡಿಯಾಟಕ್ಕೆ ಶಕ್ತಿ ಸಾಲದು. ಶ್ರೀ ಅರವಿಂದರು ನಾಲ್ಕುವರುಷವೇ ರಾಷ್ಟ್ರಕಾರ್ಯದಲ್ಲಿ ತೊಡಗಿದ್ದರೂ, ಅತ್ಯಂತ ಜಾಜ್ವಲ್ಯವಾಗಿ ಕೆಲಸವಮಾಡಿದ ರಾಷ್ಟ್ರಪುರುಷರು. ಅಷ್ಟರಲ್ಲಿಯೇ ಅವರಿಗೆ ತಿಳಿದುಬಂತು ಶಕ್ತಿ ಸಾಲದೆಂದು. ವಿಶ್ವಶಕ್ತಿಯ ಬೊಕ್ಕಸವೇ ತಮ್ಮದಾಗ ಲೆಂದು ಏಕಾಂತಸಾಧನೆಗೆ ತೆರಳಿದರು. ಈ ಬಗೆಯ ಅರಿವು ಸದಾ ಕಾರ್ಯ ರಂಗದಲ್ಲಿಯೇ ಇರುತ್ತಿದ್ದ ಗಾಂಧೀಜಿಗೂ ಆಗುತ್ತಲೇ ಇತ್ತು. ವಾರ ಕ್ಕೊಮ್ಮೆ ಮೌನ, ಮೇಲಿಂದ ಮೇಲೆ ಉಪವಾಸ, ದೈನಿಕ ಪ್ರಾರ್ಥನೆ ಇವಕ್ಕೆಲ್ಲ ಶಕ್ತಿಹೀನತೆಯ ಅರಿವೇ ಕಾರಣವು. ಉಪವಾಸ-ಪ್ರಾರ್ಥನೆಗಳು ತಾತ್ಕಾ ಲಿಕವಾದ ಶಕ್ತಿಯನ್ನು ಒದಗಿಸುವವು. ಆಗ ತಂದು ಆಗ ತಿನ್ನುವ ಸಾಹ ಸಿಯ ಸಂಸಾರದಂತೆ ಗಾಂಧೀಜಿಯ ಸಂಸಾರ. ಸಾಹಸಿಗೆ ಸಾಹಸವೇ ಸಂಪತ್ತು. ಆದ್ದರಿಂದ ಅವನು ಬಡತನಕ್ಕೆ ಹೆದರನು. ಆದರೆ ಬಡತನದ ಅರಿವು ಆದೊ ಡನೆಯೇ ಸಾಹಸವು ಕೆರಳುತ್ತದೆ. ಅದರಿಂದ ಮತ್ತೆ ನಾಲ್ಕೊಪ್ಪತ್ತು ವೀರ ಜೀವನ. ರಾಷ್ಟ್ರ ಭಕ್ತಿಯು ಅಥವಾ ರಾಷ್ಟ್ರೀಯತೆಯು ಶುದ್ಧ ಐರೋಪ್ಯರಿಂದ ಬಂದವಸ್ತು. ಆದಕ್ಕೆ ಗಾಂಧೀಜಿ ಅವರು ಹಿಂದು ಸಂಸ್ಕಾರ ಕೊಟ್ಟು ಅದಕ್ಕೆ ಆಧ್ಯಾತ್ಮದ ಮುದ್ರೆಯೊತ್ತುವ ಕೆಲಸವಮಾಡಿದ್ದರಿಂದ ಅವರ ಕೂಗು ಹಳ್ಳಿ ಹಳ್ಳಿಗೂ ಮುಟ್ಟಿ, ಗಾಂಧೀಜಿ ದುಡಿತ ನಮಗಾಗಿ ಎಂಬರಿವು ಅಖಿಲ ಭಾರತಕ್ಕೆ ಆಗಿಬಿಟ್ಟಿತು.

ಭಾರತೀಯರು ಬದುಕಿ ಉಳಿಯಬೇಕಾದರೆ ಸ್ವರಾಜ್ಯವೇ ಉಪಾಯವೆಂದು ರಾಷ್ಟ್ರಪಿತಾಮಹರಾದ ದಾದಾಭಾಯಿ ನವರೋಜಿಯವರೂ, ಸ್ವರಾಜ್ಯವು ನಮ್ಮ ಜನ್ಮಸಿದ್ಧಹಕ್ಕು ಎಂದು ತಿಲಕರೂ,ಸಾಮ್ರಾಜ್ಯಾಂತರ್ಗತ ಸ್ವರಾಜ್ಯವೇ ನಮ್ಮ ಗುರಿಯೆಂದು ಗಾಂಧೀಜಿ ಸಂಪೂರ್ಣ ಸ್ವಾತಂ ತ್ರ್ಯವೇ ನಮ್ಮ ಧ್ಯೇಯವೆಂದು ಪಂ. ಜವಾಹರಲಾಲರೂ ಹೇಳುತ್ತ ಬಂದರು. ಉದ್ದೇಶಗಳೆಲ್ಲವೂ ಸರಿಯಾಗಿವೆ. ಆದರೆ ಉಪಾಯಗಳು ಸರಿಯೋ ಅಲ್ಲವೋ ನಿರ್ಧರಿಸಬೇಕು. ಮುಳ್ಳನ್ನು ಮುಳ್ಳಿನಿಂದಲೇ ಕಿತ್ತೊಗೆಯ ಬೇಕೆಂದು ಕ್ರಾಂತಿಕಾರರು ಗುಪ್ತಮಂಡಲಗಳನ್ನು ಏರ್ಪಡಿಸಿಕೊಂಡರು. ಅಸತ್ಯವನ್ನು ಸತ್ಯದಿಂದಲೂ, ವೈರವನ್ನು ಪ್ರೇಮದಿಂದಲೂ ಗೆಲ್ಲುವುದು ನಮ್ಮ ಗುರಿಯೆಂದು ಮಹಾತ್ಮರು ಆ ಜೀವನ ಪರ್ಯಂತ ಹೋರಾಡಿದರು. ಆಜಾದ

ಹಿಂದವ ಸ್ವತಂತ್ರ ಸೈನ್ಯವನ್ನು ರಚಿಸಿ, ಜಯಹಿಂದ್ ಎಂದು ಉಗ್ಗಡಿಸುತ್ತ, ಚಲೋ ದಿಲ್ಲಿಯೆಂದು ವಿದ್ಯುತ್ ವೇಗದಿಂದ ಸಂಚಲನಗೊಳಿಸಿದ ಸುಭಾಸ ಚಂದ್ರರ ಸಾಹಸವನ್ನೂ ಭಾರತವು ಮರೆಯಲಾರದು. ಆದರೆ ಲೋಕಮಾನ್ಯರ ಸಮಕಾಲೀನರಾಗಿ ನಾಲ್ಕೇವರುಷ ರಾಷ್ಟ್ರಕಾರ್ಯಕ್ಕೆ ತೊಡಗಿ, ಇಂದಿನ ಆಂದೋಲನದ ಸರ್ವಬೀಜಗಳನ್ನೂ ಬಹುಶಃ ಬಿತ್ತಿ, ನವಭಾರತ ನಿರ್ಮಾಣಕ್ಕೆ ಈ ಉಪಾಯಗಳೂ ಶಕ್ತಿಯೂ ಸಾಲದೆಂದು ಶ್ರೀ ಅರವಿಂದರು ದಿವ್ಯ ಶಕ್ತಿ ಸಂಪಾದನೆಗೆಂದು ಏಕಾಂತ ಸಾಧಕರಾಗಿದ್ದಾರೆಂಬ ಮಾತನ್ನು ಇಲ್ಲಿ ಮತ್ತೊಮ್ಮೆ ಹೇಳಲು ಅಡ್ಡಿಯಿಲ್ಲ. ಅವರು, ತಾವು ರಾಜಕಾರಣವನ್ನು ಬಿಟ್ಟುಗೊಟ್ಟಿದ್ದೇಕೆ—ಎಂಬ ಪ್ರಶ್ನೆಯನ್ನೆತ್ತಿ ೧೯೨೦ರಲ್ಲಿ ಒಂದು ಪತ್ರವನ್ನು ಬರೆದಿದ್ದಾರೆ. ಆದರಲ್ಲಿ ವಿವರಿಸಿದ್ದೇನೆಂದರೆ—

“ನಮ್ಮ ರಾಜನೀತಿಯು ಭರತಖಂಡದ ಮೌಲಿಕವಸ್ತುವಲ್ಲ. ಅದು ವಿಲಾಯತಿ ಪದ್ಧತಿಯ ಅನುಕರಣ ಮಾತ್ರ. ಭಾರತದ ನಿಜಪ್ರಾಣವನ್ನು ಎಚ್ಚರಿಸಿ, ಸರ್ವಕಾರ್ಯವನ್ನು ಅದಕ್ಕೆ ಅನುರೂಪವಾಗಿಯೇ ಮಾಡಲಿಕ್ಕೆ ಬೇಕು. ಜನರು ಈಗ ರಾಜನೀತಿಗೆ ಆಧ್ಯಾತ್ಮಸ್ವರೂಪವನ್ನು ಕೊಡಲಿಚ್ಛಿಸುತ್ತಿದ್ದಾರೆ. ಆದರ ಫಲದಿಂದ ಬಹಳವಾದರೆ ಭಾರತೀಯ ರೂಪತಾಳಿದ ಸಾಮ್ಯವಾದ ಮಾತ್ರ ಹುಟ್ಟಬಹುದು. ಅಶುದ್ಧ ಸ್ವರೂಪದೊಳಗೆ ಅಧ್ಯಾತ್ಮವನ್ನು ಬೆರೆಸಿದರೆ ಹಸಿಯಕೊಡದಲ್ಲಿ ಕಾರಣೋದಧಿಯ ನೀರು ಸುರುವಿದ ಹಾಗೆ. ಆದರಿಂದ ಹಸಿಯಕೊಡವು ಒಡೆದು ಜಲವೆಲ್ಲ ಸೋರಿ ಹೋಗಬಹುದು. ಅಥವಾ ಅಧ್ಯಾತ್ಮಶಕ್ತಿಯೆಲ್ಲ ಇಂಗಿಹೋಗಿ ಮುನ್ನಿನ ಅಶುದ್ಧ ರೂಪವೇ ಉಳಿದರೂ ಉಳಿಯಬಲ್ಲದು.”

ಹಾಗಾದರೆ ಇಷ್ಟು ದಿನಗಳ ಇಂಥ ಅಖಂಡವಾದ ಚಳವಳಿಯು ಗಾಳಿಗೆ ಗುದ್ದಿ ಮೈನೋಯಿಸಿಕೊಂಡಂತೆಯೇ? ವಿವಿಧ ಆಂದೋಲನಗಳು ಭರತಖಂಡದ ಅವೆಷ್ಟೋ ಶಕ್ತಿಗಳನ್ನು ಜಾಗ್ರತಗೊಳಿಸಿದ್ದೇನು ಸುಳ್ಳಲ್ಲ. “ಈ ಚಳವಳಿಯಲ್ಲಿ ಸ್ವಾತಂತ್ರ್ಯ ದರ್ಶನದ ಪ್ರೇರಣೆಯಿಂದ ಪಾರಮಾರ್ಥಿಕ ಶಕ್ತಿಯು ನವರೂಪ ನವರಚನೆಗಳನ್ನು ಸೃಷ್ಟಿಸುವದು” ಎಂದು ಶ್ರೀ ಅರವಿಂದರದೇ ಅಭಿಪ್ರಾಯವಿದೆ. ಋಷಿ ಬಂಕಿಮಚಂದ್ರರು ತಮ್ಮ ಋಷಿ ದೃಷ್ಟಿಯಲ್ಲಿ ಕಂಡ “ಭಾರತೋದ್ಧಾರಕ ಮಾರ್ಗವೂ ಭಾರತಮಾತೆಯ

ದರ್ಶನ'ವೂ ಸಾಮಾನ್ಯ ಫಲಗಳಲ್ಲ. ಮ. ಗಾಂಧಿ ಅವರ ವ್ಯಾವಹಾರಿಕ ಆಧ್ಯಾತ್ಮದಿಂದ ಭಾರತದ ಅಣುಅಣುಗಳೆಲ್ಲ ಜಾಗ್ರತವಾದುದೂ, ನಾರೀಜನ ಪಕ್ಷಪಾತಿಗಳಾದ ಐರೋಪ್ಯರಿಗೂ ದುರ್ಲಭವಾದ ಸ್ತ್ರೀ ಸುಧಾರಣೆಯಲ್ಲಿ ವಿಚಿತ್ರ ಕ್ರಾಂತಿಯಾದುದೂ, ಪ್ರಾಂತೀಯ ಭಾಷೆಗಳಿಗೆ ಸಂಜೀವನೀ ಸ್ಪರ್ಶ ವಾದುದೂ, ಅಲಭ್ಯ ಲಾಭಗಳೇ ಅಲ್ಲವೇ ? ಭರತಖಂಡವು ತನ್ನ ಉದ್ಧಾರ ವನ್ನು ಮಾತ್ರ ಮಾಡಿಕೊಳ್ಳುವದಿದ್ದರೆ ಮಾತ್ರ ಈ ಉಪಾಯಗಳಿಂದ ಸಂಪೂರ್ಣ ಫಲಪ್ರಾಪ್ತಿಯಾಗುತ್ತಿತ್ತು. ಆದರೆ ಕರ್ನಾಟಕವು ಭಾರತದ ಗುರುಕುಲವೆನಿಸಿದಂತೆ, ಭಾರತವು ಜಗತ್ತಿನ ಗುರುಕುಲವಾಗಬೇಕಾದುದರಿಂದ ಶಕ್ತಿಯ ಮೂಲಸಿಧಿಯೇ ಅದಕ್ಕೆ ಕೈವಶವಾಗಬೇಕಾಗಿದೆ. "ತನ್ನನ್ನು ತಾನು ಕೊಲ್ಲಲು ಒಂದು ಸೂಜಿ ಸಾಕು. ಆದರೆ ಅನ್ಯರನ್ನು ವಧಿಸಲು ಕತ್ತಿ-ಗುರಾಣಿಗಳು ಬೇಕೆಂ"ದು ಶ್ರೀ ರಾಮಕೃಷ್ಣ ಪರಮಹಂಸರು ಹೇಳಿರುವರು. ರಾಷ್ಟ್ರಸಭೆಯು ತನ್ನ ರಾಷ್ಟ್ರಶಕ್ತಿಯನ್ನು ಬೆಳೆಸಿಕೊಳ್ಳುತ್ತ ಲಿದ್ದರೆ ರಾಷ್ಟ್ರಾಂಗಗಳಾದ ಹಿಂದು-ಮಹಾಸಭೆ ಹಾಗೂ ಮುಸ್ಲಿಂಲೀಗುಗಳು ಇತ್ತ ಗರಡಿಯಲ್ಲಿ ಸಾಧಕಮಾಡುವಂತೆ ಹೋರಾಡುತ್ತಲಿವೆ. ಗರಡಿಮನೆ ಯಲ್ಲಿ ಹಿಂದು-ಮುಸ್ಲಿಂ ಜಟ್ಟಿಗಳು ಕುಸ್ತಿ ಹಿಡಿಯುತ್ತಾರೆ. ಒಬ್ಬರನ್ನೊಬ್ಬರು ಒಗೆದಾಡುತ್ತಾರೆ; ಒಮ್ಮೊಮ್ಮೆ ಒಬ್ಬರಿಗೆ ಪೆಟ್ಟು ಹತ್ತುತ್ತದೆ; ಇನ್ನೊಬ್ಬರು ಗಾಯಗೊಳ್ಳುತ್ತಾರೆ. ಏನೇ ಆದರೂ ಅದು ಶಕ್ತಿಸಾಧನವೇ ಸರಿಯೆಂದು ಸೂಕ್ಷ್ಮವಾಗಿ ನಿರೀಕ್ಷಿಸಿದಾಗ ಕಂಡುಬರುವಂತಿದೆ. ಈ ಉಪಾಯಗಳಿಂದೇನೂ ಆಗದೆಂದು ಹೇಳಲ್ಪಡುತ್ತಿದ್ದರೂ, ಇಷ್ಟೂ ಇಲ್ಲದವರಿಗೆ ಈ ಸಾಧನಗಳಾದರೂ ಬೇಕು. ಜಡತೆಗಿಂತ ಚೇತನವು ಎಂಥದಿದ್ದರೂ ಹೆಚ್ಚಿನದು. ಪಾಶ್ಚಾತ್ಯರ ಸಂಪರ್ಕದಿಂದ ನಮಗೆ ಮೂರು ಸಂಗತಿಗಳು ದೊರೆತವಂತೆ. ಅವು— (೧) ಪಾಶ್ಚಾತ್ಯಸಂಪರ್ಕವು ತಾರ್ಕಿಕ ಬುದ್ಧಿಯ ಅನಿರ್ಬಂಧ ಪ್ರವೃತ್ತಿಯನ್ನು ಜಾಗ್ರತಗೊಳಿಸಿತು. (೨) ಹಳೆಯ ಸಂಸ್ಕೃತಿಗೆ ಹೊಸವಿಚಾರಗಳ ಹೆಪ್ಪು ಹಾಕಿ ಅದಕ್ಕೊಂದು ಗಟ್ಟಿತನ ತಂದಿತು. (೩) ಈ ನೂತನ ದೃಷ್ಟಿಯಿಂದ ಪೂರ್ವೇತಿಹಾಸವನ್ನೆಲ್ಲ ನೋಡಹಚ್ಚಿತು. "ಹಿಂದುಸ್ಥಾನದಲ್ಲೆ ಆಸೇತು ಹಿಮಾಚಲವಾಗಿ ಹಳೆಯ ಮತಪಂಗಡಗಳೂ, ಸಾಧನ ಮಾರ್ಗಗಳೂ ಮತ್ತೆ ಪ್ರಾಣತಂದುಕೊಂಡು ತಮ್ಮ ಡಂಗುರವನ್ನು ಒತ್ತಿ ಸಾರಲು ಬಾಯಿ ಮಾಡಿ ಕೈಕಾಲು ಅಲ್ಲಾಡಿಸುತ್ತಲಿವೆ. ಇಸ್ಲಾಮಿ ಧರ್ಮವೂ ಇತ್ತೀಚೆಗೆ ಹೊಸ

ಜಾಗ್ರತಿಯಿಂದ ಜಾಗ್ರತವಾಗಿ ಮೂಲ ಇಸ್ಲಾಮದ ಆದರ್ಶಗಳಿಂದ ಮೈ ತುಂಬಿ ತ್ರಾಣಪಡೆಯಲು ಹವಣಿಸುತ್ತದೆ." ಹೀಗೆ ಭಾರತವು ಪಶ್ಚಿಮದ ನೂತನಪದ್ಧತಿಗಳನ್ನು ತನಗೆ ಹಾಳತವಾಗುವಂತೆ ರೂಪಾಂತರ ಮಾಡಿ ಸ್ವೀಕರಿಸಿ, ಮೇಲೆ ತನ್ನ ಮುದ್ರೆಯೊತ್ತಿ ಭಾರತಪದ್ಧತಿಯನ್ನಾಗಿ ಮಾಡುತ್ತಲಿದೆ.

ಅತ್ತ ಇರೋಪವು "ತನ್ನ ಗ್ರಹಿಕೆಗಳ ಸಂಕುಚಿತತೆಯನ್ನು ಮಿಕ್ಕಬೇಕು" ಎಂದು ಪೌರ್ವಾತ್ಯರ ಸಾರವತ್ತಾದ ಆಚಾರವಿಚಾರಗಳನ್ನು ಬೇಗ ಬೇಗನೆ ಒಳದುಂಬಿಕೊಳ್ಳುತ್ತಿದೆ.-"ಆತ್ಮನು ಸರ್ವಸಮರ್ಥನು; ಸರ್ವಾಂತರ್ಯಾಮಿಯು; ಸರ್ವಜಯಿಯು; ಅಜೇಯನು; ಅಂಥ ಆತ್ಮನೇ ನಾನು. ಶಿವೋಽಹಂ" ಎಂದು ದಶದಿಕ್ಕುಗಳೆಲ್ಲ ಪ್ರತಿಧ್ವನಿಸುವಂತೆ ವಿವೇಕಾನಂದ-ರಾಮತೀರ್ಥರಂಥ ಭಾರತಕೇಸರಿಗಳು ಇರೋಪ್ಯರಲ್ಲಿ ಗರ್ಜಿಸಿದವು ಅತ್ತ ಜರ್ಮನ್ ತತ್ವವೇತ್ತನಾದ ನೀಟ್ಸೆ ಎಂಬವನು ಡಂಗುರಿಸಿದ್ದೇನೆಂದರೆ-"ಪ್ರಿಯಮನುಜ! ಹಿಂದಿನ ಶಾಸ್ತ್ರಗಳು ಪುಣ್ಯಶಾಲಿಯಾಗೆಂದು ಬೋಧಿಸಿದರೆ, ನಾನು ಸಮರ್ಥನಾಗೆಂದು ಉಪದೇಶಿಸುತ್ತೇನೆ. ಸತ್ಪುರುಷನಾಗೆಂದು ಪುರಾತನವು ಹೇಳಿದರೆ ನಾನು ಮಹತ್ತರ ವ್ಯಕ್ತಿಯಾಗೆಂದು ಸಾರುತ್ತೇನೆ. ಮಾನವನಾದ ನೀನು ಅತಿಮಾನವನಾಗೆಂದು ಹೇಳುತ್ತೇನೆ" (ಇದರ ಪರಿಣಾಮವಾಗಿಯೇ ಎರಡು ಮಹಾಯುದ್ಧಗಳಾದವು.) ಇರೋಪಿನಲ್ಲಿ ನವವಿಚಾರವಾದವು ನವೀನವಾಗಿ ಶಕ್ತಿಮಾರ್ಗವನ್ನು ಅರಸಿದ್ದರೆ, ಭಾರತದಲ್ಲಿ 'ಅವ್ಯಕ್ತ'ವನ್ನು ಪರೀಕ್ಷಿಸುವ ಕೆಲಸವನ್ನು ಜಗದೀಶಚಂದ್ರರು ಅಖಂಡವಾಗಿ ಸಾಗಿಸಿದರು. ಇದನ್ನೆಲ್ಲ ನೋಡಿದರೆ ಇರೋಪ್ಯರೂ ಭಾರತೀಯರೂ ತಂತಮ್ಮ ಕೊರತೆಗಳನ್ನು ಅರಿತಿದ್ದು ಅವುಗಳನ್ನು ತುಂಬಿಕೊಳ್ಳಲು ಯತ್ನಿಸುತ್ತಲೇ ಇದ್ದಾರೆ. ಪರಕೀಯರವೆಂದು ಪರಸ್ಪರರು ಮೇಲೆ ಮೇಲೆ ಮೂಗು ಮುರಿಯುತ್ತಿದ್ದರೂ ಕದ್ದು, ಮುಚ್ಚಿ ರೀತಿ ಪದ್ಧತಿಗಳನ್ನು ಅಳವಡಿಸಿಕೊಳ್ಳುವ ಕೆಲಸವು ಅವ್ಯಾಹತವಾಗಿ ಸಾಗಿದುದನ್ನು ನಾವು ನಿತ್ಯಶಃ ವ್ಯವಹಾರದಲ್ಲಿ ಕಣ್ಮುಟ್ಟ ಕಾಣುತ್ತಿದ್ದೇವೆ.

"ತನ್ನ ಬಗೆ-ಬದುಕುಗಳ ನೆಲೆಬಿಡದೆ, ಪೌರ್ವಾತ್ಯ ದೇಶಗಳಿಂದ ಬಂದ ಬೆಳಕನ್ನೂ ಬೆಳೆಸಿಕೊಂಡು ಇರೋಪವು, ತನ್ನ ಆತ್ಮತತ್ವದ ಪರಿತ್ಯಾಗವನ್ನು ಮಾತ್ರ ಮಾಡಿಲ್ಲ." ಭಾರತವು ಬಾಳಿಬದುಕಬೇಕಾದರೆ, ಬೆಳೆದು ಸಫಲ

ವಾಗಬೇಕಾದರೆ ಅದು ಯಾವ ಯಾವ ಸಂಗತಿಗಳ ಬಗೆಗೆ ಎಚ್ಚರಪಡಬೇಕಾಗಿದೆಯೆಂಬುದನ್ನು ಕುರಿತು ಶ್ರೀ. ಅರವಿಂದರ ಸೂಚನೆಯೇನೆಂದರೆ—ಬಾಳಬೇಕೆಂಬಾಶೆಯ ಮಿಡಿತ, ಪ್ರಾಯೋಗಿಕ ಚಟುವಟಿಕೆಗಳ ಪ್ರವೃತ್ತಿ, ಆಧುನಿಕವಾದ ಮಹಾಸಾಹಸಿಕ ಪ್ರಯತ್ನವಾದ ಇವುಗಳಿಗೆ ಇಂಬುಗೊಟ್ಟು ಜೀವ, ಜಗತ್ತು, ಈಶ್ವರ ಈ ತ್ರಯಗಳ ಬಗ್ಗೆ ಇರುವ ನಮ್ಮ ಮೂಲ ದೃಷ್ಟಿಯನ್ನು ಬಿಡದಿರಬೇಕು. ಇವೆರಡೂ ಮಾರ್ಗಗಳು ತಂತಮ್ಮ ವಿವಕ್ಷಿತಾರ್ಥ ಪ್ರಪಂಚವನ್ನು ಕಂಡುಕೊಂಡು ತಂತಮ್ಮ ಹುರುಳು ತಿರುಳಿನ ಸಾರಸರ್ವಸ್ವವನ್ನು ತಿಳಿದು, ಪರಸ್ಪರ ಪೋಷಣೆ ಪೂರ್ಣತೆಗಳಿಗೆ ಬೇಕೇ ಆಗಿವೆ.

ಆಧ್ಯಾತ್ಮವು ಭರತಖಂಡದ ಜೀವನವೆಂದೂ, ಅದರಿಂದಲೇ ಭಾರತದ ಉದ್ಧಾರವೆಂದೂ, ಭಾರತದ ಉದ್ಧಾರವು ಬರಿಯ ತನ್ನ ಮಟ್ಟಿಗಿರದೆ ಇಡಿಯ ಮಾನವ ಜಾತಿಗೇ ಸಂಬಂಧಿಸಿದೆಯೆಂದೂ ಬಲ್ಲವರು ಸಿದ್ಧಪಡಿಸಿದ್ದಾರೆ. ಇರೋಪ-ಭಾರತಗಳು ಶಕ್ತಿಸಂಪಾದನೆಗಾಗಿ ಹಂಬಲಿಸುತ್ತಿರುವುದೂ,ಪರಸ್ಪರ ಗುಣಗ್ರಹಣ ಮಾಡುತ್ತಿರುವುದೂ ತಿಳಿದು ಬಂದಿದೆ. ಐರೋಪ್ಯದೇಹಕ್ಕೆ ಭಾರತದ ರೂಪ-ವರ್ಣಗಳೂ ಭಾರತಶರೀರಕ್ಕೆ ಪಾಶ್ಚಾತ್ಯ ರಕ್ತ-ಪ್ರವೃತ್ತಿಗಳೂ ಬರಲಿವೆಯೆಂದೂ, ಆಗ ಮಾನವನು ಪೂರ್ಣಜೀವನಕ್ಕೆ ತಕ್ಕವನೆಂದೂ ಜಗತ್ತು ಹಾರೈಸಿದೆ. ಪೂರ್ಣ ಜೀವನಕ್ಕೆ ಉಪಾಯವು ಅಪೂರ್ಣ ಜೀವನದಲ್ಲಿ ಸಿಗದು. ಪೂರ್ಣ ಜೀವನವಲ್ಲಿ ಅದನ್ನು ಅರಸಬೇಕು. ದೇವನೊಬ್ಬನೇ ಪೂರ್ಣನು. ಅವನ ಜೀವನವೇ ಪೂರ್ಣ ಜೀವನ. ಮಾನವನು ಭೌತಿಕ ವಿಜ್ಞಾನದಲ್ಲಿ ಹಲವು ಸಂಶೋಧನಗಳನ್ನು ಮಾಡಿ ಬೇರೆ ಬೇರೆ ಲೋಕಗಳವರೆಗೆ ಮೇಲೇರಿ ಹೋಗುತ್ತಿರುವಂತೆ ಜೀವನು ಪೂರ್ಣ ಜೀವನವನ್ನು ಗಳಿಸುವ ಹಲವು ಉಪಾಯಗಳನ್ನು ಹೂಡಿ ಕೊನೆಗೆ ಪೂರ್ಣಜೀವನಸ್ಥಾನವಾದ ದಿವ್ಯಶಕ್ತಿಯ ಸನ್ನಿಧಿಗೆ ಹಾರಿ ಹೋಗಬೇಕಷ್ಟೇ? ಜೀವನವೆಂದರೆ ಖಂಡಜೀವನ. ಅದನ್ನು ಸುಗಮಗೊಳಿಸಲು ಇಷ್ಟುದಿನ ಭಕ್ತಿ, ಕರ್ಮ, ಹಠ, ರಾಜ, ಜ್ಞಾನ ಮೊದಲಾದ ಖಂಡಯೋಗಗಳನ್ನು ಅನುಸರಿಸುತ್ತಿದ್ದ ಮಾನವನಿಂದು ಅಖಂಡಜೀವನವೆಂದರೆ ಪೂರ್ಣಜೀವನವನ್ನು ಪ್ರಾಪ್ತ ಮಾಡಿಕೊಳ್ಳಲು 'ಪೂರ್ಣಯೋಗ'ವನ್ನು ಆಶ್ರಯಿಸಬೇಕಾಗಿದೆ. ಏಕೆಂದರೆ

"ಮಾನವನ ಹೃದಯ, ಬುದ್ಧಿ ಮತ್ತು ಕೃತಿ ಇವೆಲ್ಲ ಸಂಪೂರ್ಣವಾಗಿ ಒಳಗಿನಿಂದಲೇ ಬದಲಾಗಬೇಕು. ರಾಜಕೀಯ, ಸಾಮಾಜಿಕ ಸತ್ರಗಳಿಂದಲ್ಲ; ಧರ್ಮಶ್ರದ್ಧೆ-ತತ್ವವಿಚಾರಗಳಿಂದಲ್ಲ. ಆದರೆ ನಮ್ಮೊಳಗಿನ ಹಾಗೂ ಜಗತ್ತಿನೊಳಗಿನ ದೇವನನ್ನು ಸ್ವಾನುಭವಿಸಿ, ಆ ಅನುಭವ ಮೂಲಕವಾಗಿ, ಜೀವನವನ್ನು ತಿರುಗಿ ಎರಕಹೊಯ್ಯುವುದರಿಂದ ಮಾತ್ರ ಆ ಮಾರ್ಪಾಡಾಗಬೇಕು. ಇದು ಪೂರ್ಣಯೋಗದ ಸಾಧನೆಯಿಂದ ಮಾತ್ರ ಫಲಿಸಬಲ್ಲದು.

ಪೂರ್ಣಯೋಗದ ಜನ್ಮಸ್ಥಳವೆಂದರೆ ಪಾಂಡಿಚೇರಿಯಲ್ಲಿರುವ ಶ್ರೀ ಅರವಿಂದ ಆಶ್ರಮವು. ಅದು ಪಾಶ್ಚಾತ್ಯ ಪೌರ್ವಾತ್ಯ ಪರಮಾವಧಿ ಸಂಸ್ಕೃತಿಗಳ ಮಧುರ ಸಂಗಮವು ರಾಜಕೀಯ ಜೀವನದಿಂದ ಸಂಪೂರ್ಣ ಅಲಿಪ್ತರಾಗಿ ಮೂವತ್ತೆಂಟು ನಾಲ್ವತ್ತು ವರುಷಗಳಿಂದ ಏಕಾಂತವನ್ನೂ, ಇಪ್ಪತ್ತೈದು ವರುಷಗಳಿಂದ ಮೌನವನ್ನೂ ಆಚರಿಸುತ್ತಲಿರುವ ಶ್ರೀ ಅರವಿಂದರೇ ಪೂರ್ಣಯೋಗಿಗಳು. ಆ ಯೋಗವನ್ನು ಸಾಧಿಸಬೇಕೆಂದು ಜಗತ್ತಿನ ವಿವಿಧ ಭಾಗಗಳಿಂದ ಬಂದು ನೆಲೆಸಿದ ಏಳನೂರು ಜನ ಶಿಷ್ಯರಿದ್ದಾರೆ. ಸಾನ್ನಿಧ್ಯ ಮಾತ್ರದಿಂದಲೇ ಆ ಯೋಗವನ್ನು ಶಿಷ್ಯರು ಗಳಿಸಬೇಕಾಗಿದೆ. ಭಾರತವು ಸಂಕಲ್ಪ ಮಾಡಿದ್ದಾದರೆ, ಯಾವ ತೊಡಕುಗಳನ್ನು ದಾಟಲು ಮಾನವ ಜಾತಿಯೇ ತವಡರಿಸುತ್ತಿದೆಯೋ ಅವುಗಳನ್ನು ಲೀಲಾಜಾಲವಾಗಿ ಬಿಡಿಸಿ ಮಾಲೆಗಳಾಗಿ ಮಾಡಿಕೊಳ್ಳಬಹುದೆಂದೂ, ಅದರ ಪ್ರಾಚೀನ ಜ್ಞಾನನಿಧಿಯಲ್ಲಿ ಎಲ್ಲ ಸಮಸ್ಯೆಗಳನ್ನು ಬಿಡಿಸುವ ಹಂಚಿಕೆ ಹೇಳಿದೆಯೆಂದೂ ಎಂದೋ ಮನಗಂಡವರಾದ್ದರಿಂದ ಇಂದು ಶ್ರೀ ಅರವಿಂದರು ಜಗತ್ತಿನ ಹಣೆಬರಹವನ್ನು ಒರೆಸಿ, ಅಳಿಸಿ ನೂತನ ಬ್ರಹ್ಮಲಿಖಿತವನ್ನು ಕೊರೆಯಲು ಸನ್ನದ್ಧರಾಗಿದ್ದಾರೆ. 'ನನಗೆ ಲಕ್ಷ್ಯಗಟ್ಟಲೆ ಶಿಷ್ಯರು ಬೇಕಾಗಿಲ್ಲ. ಒಂದು ನೂರು ಜನರು, ಕ್ಷುದ್ರ ಅಹಂಕಾರ ಶೂನ್ಯರಾದ ಪೂರ್ಣಮಾನವರು ಪರಮೇಶ್ವರನ ಯಂತ್ರಸ್ವರೂಪರಾಗಿ ಲಭಿಸಿದರೆ ಅಷ್ಟೇ ಸಾಕಾಗುವದು. ಇಂಥ ಮನುಷ್ಯರೇ ಈ ದೇಶವನ್ನು ಉದ್ಧರಿಸುವರು" ಎಂಬ ನಂಬಿಕೆಯುಳ್ಳವರಾಗಿದ್ದಾರೆ.

ಹೀಗೆ ಭರತಖಂಡವು ಮೂರುಸಾವಿರವರುಷ ಅಖಂಡವಾಗಿ ದುಡಿದು, ಸ್ವಸ್ಥವಾಗಿ ಮಲಗಿ ನಿದ್ರೆ ತಿಳಿದೆದ್ದ ಬಳಿಕ ಜಗತ್ತಿನಲ್ಲಿ ಮಾಡಬೇಕಾದ ದಿವ್ಯ ಕಾರ್ಯದ ಸಿದ್ಧತೆಯು ಈ ಬಗೆಯಾಗಿ, ಯಾವ ನಿಟ್ಟಿನಲ್ಲಿ ಹರಿದರೂ ಸಮುದ್ರವನ್ನು ಸೇರುವುದೇ ಹೊಳೆಯ ಗುರಿಯಾಗಿರುವಂತೆ ಭಾರತದ ಪತನ, ದುರ್ದೆಶೆ,

ನೋಲು, ಬಡತನ, ಅಜ್ಞಾನ ಇವೆಲ್ಲ ಪರಿಸ್ಥಿತಿಗಳೂ ಅದರ ಕಲ್ಯಾಣಕ್ಕೇ ಸಹಾಯಕಾರಿಗಳಾಗಿ ಬಂದಿರುವುದನ್ನು ನಾವು ಕಾಣಬಹುದು. ಜಗತ್ತಿನಲ್ಲಿ ಇಂದು ನಡೆದ ಗಲಬಿಲಿಗಳೆಲ್ಲವೂ ನಾಳೆಬರಲಿರುವ ಹಿರಿಯ ಹಬ್ಬದ ಸಾವರಣೆಗಳೇ ಸೈ. ಕಸಗುಡಿಸುವುದು, ಗೋಡೆಸಾರಿಸುವುದು, ಹಾಸಿಗೆ-ಹೊದಿಕೆ ಒಗೆಯುವುದು ಮೊದಲುಗೊಂಡು ಕಾಳುಕಡಿ ಹಸನಿಸುವುದು, ಉಡುಪು-ತೊಡಪು ಕೊಂಡುಕೊಳ್ಳುವುದು ಮೊದಲಾದವುಗಳ ವರೆಗೆ ಎಲ್ಲ ಕೆಲಸಗಳು ಹಬ್ಬದ ಸಾವರಣೆಗಳೆಂದೆನಿಸುವದಿಲ್ಲವೇ ? ಇಷ್ಟೆಲ್ಲ ಅಣಿಯಾದ ಮೇಲೆ ಹಬ್ಬವು ಬಾರದೆ ಹೋಗುತ್ತದೆಯೇ ? ಸಾವರಣೆಯ ಸಲುವಾಗಿ ಹಬ್ಬ ಬರುವದೆಂದಲ್ಲ. ಹಬ್ಬದ ಸಲುವಾಗಿ ಸಾವರಣೆ ನಡೆದಿದೆ. ಹಬ್ಬದ ಕಾರ್ಯಕ್ರಮವು ಸಾಮಾನ್ಯ ದಿನದ ಕಾರ್ಯಕ್ರಮದಂತೆ ಸಾಮಾನ್ಯವಾಗಿರಲಾರದು; ಅಸಾಮಾನ್ಯವಾಗಿರಬೇಕಷ್ಟೇ ?

ಹಠಯೋಗದಿಂದ ಶರೀರಶುದ್ಧಿಯೂ, ರಾಜಯೋಗದಿಂದ ಮನಶ್ಶುದ್ಧಿಯೂ, ಆಗುವಂತೆ ಪೂರ್ಣಯೋಗದಿಂದಾಗುವ ಫಲಪರಿಣಾಮಗಳೇನು? ಎಂಬುದನ್ನು ತಿಳಿಯಬೇಕಾದರೆ ವಿಜ್ಞಾನದ ಪರಿಚಯವೊಂದಿಷ್ಟು ಆಗಿರುವುದು ಆವಶ್ಯಕ. ವಿಜ್ಞಾನವೆಂದರೆ ಸಾಯನ್ಸವಲ್ಲ; ಸತ್, ಚಿತ್, ಆನಂದ, ವಿಜ್ಞಾನ, ಮನ, ಪ್ರಾಣ, ದೇಹ, ಎಂಬ ವಿಭಾಗಗಳನ್ನು ಪೂರ್ವಿಕರು ನಮ್ಮೊಳಗೆ ಕಲ್ಪಿಸಿದ್ದಾರೆ. ಇವುಗಳಲ್ಲಿ ದೇಹ, ಪ್ರಾಣ, ಮನಗಳೇ ನಮ್ಮ ಅನುಭವಕ್ಕೆ ಗೊತ್ತಿವೆ. ಅದರಂತೆ ಮೇಲಿನ ಸತ್, ಚಿತ್, ಆನಂದಗಳು "ಸಚ್ಚಿದಾನಂದ"ವೆಂದಾಗಲಿ, ಆನಂದವೇ ಅವುಗಳಲ್ಲಿ ಮುಖ್ಯವಾದುದರಿಂದ ಬರಿಯ "ಆನಂದ"ವೆಂದಾಗಲಿ ಶಾಸ್ತ್ರಗಳಲ್ಲಿ ಬಂದಿರುವದುಂಟು. ಕೆಳಗಿನದು ಜೀವನರಾಜ್ಯ; ಮೇಲಿನದು ಪರಮನರಾಜ್ಯ. ಅವುಗಳ ನಡುವೆ ಸೇತುವೆಯಂತಿರುವ ನಿತ್ಯದಿವ್ಯರಾಜ್ಯವೇ ವಿಜ್ಞಾನ. ಸಚ್ಚಿದಾನಂದದಲ್ಲಿ ದೇಹಸ್ಥಪುರುಷನು ಗಾಢಾನಂದಮಗ್ನನಾಗಿ ನಿರಾಕಾರ ದಶೆಯಲ್ಲಿರುತ್ತಾನೆ. ಅವನೇ ಪರಮ ಆತ್ಮನು. ಆದರೆ ವಿಜ್ಞಾನದಲ್ಲಿ ಅವನು ಸಕಲೈಶ್ವರ್ಯಸಂಪನ್ನನಾಗಿ ಈಶ್ವರನಾಗಿರುತ್ತಾನೆ. ಸತ್, ಚಿತ್, ಆನಂದಗಳು ವಿಜ್ಞಾನದಲ್ಲಿ ಪ್ರಕಾಶ, ಶಕ್ತಿ, ಶಾಂತಿಗಳಾಗಿಯೂ, ಜೀವನರಾಜ್ಯದಲ್ಲಿ ಸತ್ವ, ರಜ, ತಮಗಳಾಗಿಯೂ, ಮಾರ್ಪಡುತ್ತವೆ. ಆಪರಾಕೃತಿಯನ್ನು ಬದಲಿಸಿ, ದಿವ್ಯವನ್ನಾಗಿ

ಮಾಡುವ ಸಾಮರ್ಥ್ಯವು ವಿಜ್ಞಾನದಲ್ಲಿಯೇ ಅದೆಯೆಂದೂ, ಆ ವಿಜ್ಞಾನ ಸಿದ್ಧಿಯೇ ಪೂರ್ಣಯೋಗದ ಫಲಪರಿಣಾಮವೆಂದೂ ಶ್ರೀ ಅರವಿಂದರ ಮತ. ವಿಜ್ಞಾನದ ಸ್ಥಾನಕ್ಕೆ ಏರುತ್ತ ಹೋದವರು ಅಲ್ಲಿ ನಿಲ್ಲಲಿಕ್ಕಾಗದೆ ಅದರಾಚೆಯ ಸಚ್ಚಿದಾನಂದವನ್ನು ಅಲಕ್ಷ್ಯನೆ ಪ್ರವೇಶಿಸುತ್ತಿದ್ದುದರಿಂದ ಅವರು ಪುನಃ ಜೀವ ರಾಜ್ಯದಲ್ಲಿ ಅದನ್ನು ಕರೆತರಲು ಸಮರ್ಥರಾಗರೆಂದೂ, ಪೂರ್ಣಯೋಗಿಯು ವಿಜ್ಞಾನಸ್ಥಾನದಲ್ಲಿ ಗಟ್ಟಿಗೊಂಡು ನಿಲ್ಲಬಲ್ಲನಲ್ಲದೆ, ಅವನು ಪುನಃ ಜೀವರಾಜ್ಯ ದಲ್ಲಿ ಈಶ್ವರೀಯ ಐಶ್ವರ್ಯವನ್ನು ತರಬಲ್ಲನೆಂದೂ ಹೇಳುತ್ತಾರೆ. ಮೇಲಾಗಿ ಈ ಹೊಸಯೋಗಕ್ಕೆ ವಿಜ್ಞಾನವು ಈಶ್ವರನಿಂದ ಮಂಜೂರಾಗಿದ್ದು, ಅದಕ್ಕೆ ಪೂರ್ಣಯೋಗವೇ ಮಾರ್ಗವೆಂದು ಕಂಡುಹಿಡಿಯಲಾಗಿದೆ. ವಿಜ್ಞಾನವು ಮನಸ್ಸಿಗೂ ಮೇಲಿನ ರಾಜವಾದದ್ದರಿಂದ ಅದಕ್ಕೆ ಅತಿಮಾನಸವೆಂದೂ ಹೆಸರು. ಮನಶ್ಶುದ್ಧಿಯಿಂದ ಜೀವನಯೋಗಕ್ಕೆ ತೊಡಗಿದವನಿಗೆ ಅಡಿಗಡಿಗೆ ಪತನದ ಭಯವಿದೆಯೆಂದೂ, ಆ ವರ್ಗದಲ್ಲಿ ಎಷ್ಟು ಮುಂದುವರಿದವರೂ ತುಸು ಅಲಕ್ಷ್ಯ ಮಾದರು ಸಹ ಸರ್ವನಾಶವು ಕಟ್ಟಿಟ್ಟ ಹಾಗೆಂದೂ, ಆದರೆ ವಿಜ್ಞಾನಮಾರ್ಗ ದಲ್ಲಿ ಆ ಭಯವು ಎಳ್ಳಷ್ಟೂ ಇಲ್ಲವೆಂದೂ, ಮುಂದುವರಿದಷ್ಟು ಗಟ್ಟಿಮುಟ್ಟಾದ ನೆಲೆಗಟ್ಟಾಗುವದೆಂದೂ ಹೇಳುತ್ತಾರೆ. ಹೊಸಯುಗದ ವಿಜ್ಞಾನವು ಉದಯ ವಾಗುವ ಮೊದಲು ಬರಿಯ ಮನಶ್ಶುದ್ಧಿಯಿಂದಲೇ ಉನ್ನತಿಗೇರಿದ ಉದಾ ಹರಣೆಯನ್ನು ಜಗತ್ತಿಗೆ ತೋರಿಸಲೆಂದು ಮ. ಗಾಂಧಿ ಅವರ ಜೀವನವು ನಮ್ಮ ಮುಂದೆ ಸಾಗಿತು. ಮಾನಸರಾಜ್ಯದ ಮಹಾಜೀವನವೇ ಈ ಪ್ರಕಾರ ಅಲೌಕಿಕವಾಗಿ ಕಂಗೊಳಿಸುತ್ತಿರಲು, ಆ ಅತಿಮಾನಸ ಅಥವಾ ವಿಜ್ಞಾನ ಮಯ ಜೀವನದ ಮಹಿಮೆಯನ್ನು ಅದೆಂತು ತರ್ಕಿಸಲಿಕ್ಕಾದೀತು? ಅಂತಹ ಅಗಾಧ ಪೂರ್ಣವಾದ ವಿಜ್ಞಾನಜೀವನವು ಲೌಕಿಕ ಜೀವನದಲ್ಲಿ ಕಾಣಿಸಿ ಕೊಳ್ಳಲೆಂದು ನಾವೆಲ್ಲರೂ ಹಾರಯಿಸಿದರೆ ತಪ್ಪೇನು?

# ದಿವ್ಯರಾಜ್ಯ

ಎರಡನೆಯ ಮಹಾಯುದ್ಧದ ಕಾಲಕ್ಕೆ ಬ್ರಿಟಿಶ್ ಸರಕಾರಕ್ಕೆ ವ್ಯವಹಾರಾನುಕೂಲತೆಯ ಕಾರಣದಿಂದಾಗಲಿ ಹೃದಯ ಪರಿವರ್ತನದಿಂದಾಗಲಿ ಭಾರತದ ಸ್ನೇಹವು ಬೇಕೆಂದೆನಿಸಿತು. ತನ್ನಲ್ಲಿ ಸ್ನೇಹವಂಕುರಿಸದೆ ಪರಸ್ನೇಹವನ್ನು ಹಾರಯಿಸುವುದು ಔಪಚಾರಿಕವೆನಿಸುತ್ತದೆ. ಸ್ನೇಹವರ್ಧನೆಗೆ ತ್ಯಾಗವು ಪೂಜಾಸಾಮಗ್ರಿ. ತ್ಯಾಗವಿಲ್ಲದ ಸ್ನೇಹವು ಬರಡು. "ಒಣಮಾಯೆ ಮೊಲೆಗೆ ಹಾಲಿಲ್ಲ" ವೆನ್ನುವಂತೆ ಭಾರತದ ಸ್ನೇಹ ಬೇಡುವ ಬ್ರಿಟನ್ನು ಏನು ತ್ಯಾಗ ಮಾಡಿತು ? ಕ್ರಿಪ್ಸಯೋಜನೆಯಂತೆ ಭಾರತಕ್ಕೆ ಸ್ವಾತಂತ್ರ್ಯದಾನ ಕೊಡುವ ನಿಶ್ಚಯ ಮಾಡಿತು. ಆ ಯೋಜನೆಯನ್ನು ಭಾರತದ ಮುತ್ಸದ್ದಿಗಳು ಬುದ್ಧಿವಂತಿಕೆಯಿಂದ ಪರೀಕ್ಷಿಸಿದರು. ಸಂಪೂರ್ಣವನ್ನು ಬೇಡುವವರು ಅರ್ಧಮರ್ಧದಿಂದ ಸಂತೋಷಪಡೋಣವೇ ಎಂದು ಬಿಗಿದು ಹಿಡಿದರು. ಕ್ರಿಪ್ಸಯೋಜನೆಯು ಕಾಣಲಿಕ್ಕೆ ಸರ್ವಾನುಕೂಲವಿದ್ದರೂ ಒಳಗಿನ ಹೂರಣ ವೇನಿದೆಯೋ ಎಂದು ಸಂಶಯಾಕುಲರಾಗಿ ಅದನ್ನು ಕಣ್ತೆರೆದು ನಿಟ್ಟಿಸಿದರು. ಕಿವಿತೆರೆದು ಆಲಿಸಿದರು; ತಲೆತೆರೆದು ಎಳೆಗೆ ಎಳೆ ಎಣಿಸಿ ನೋಡಿದರು. ದಿಟ್ಟಿಸಿನೋಡಿದರೆ ಮನೆಯ ಹೆಂಡತಿ ಮೆಳ್ಳಿ. ಪಾಂಡಿಚೇರಿಯ ಪರಮಹಂಸರು ತಮ್ಮ ಮೌನ ಮುರಿದು "ಕ್ರಿಪ್ಸಯೋಜನೆ ಬಿಡಬೇಡಿರಿ" ಎಂದು ಸಲಹೆ ಇತ್ತರು. ಆದರಿಂದ ನರೇಂದ್ರರ ಪ್ರಶ್ನೆಯಾಗಲಿ, ಮುಸಲ್ಮಾನರ ಸಮಸ್ಯೆಯಾಗಲಿ ಏಳುವಂತಿರಲಿಲ್ಲವೆಂದು ಬಲ್ಲವರು ಹೇಳುತ್ತಾರೆ. ಪರಮಾತ್ಮನ ಸಂಕಲ್ಪಾನುಸಾರವಾಗಿ ಸಿದ್ಧವಾಗಿ ಬಂದ ಆ ಯೋಜನೆಯನ್ನು ಭಾರತೀಯರು ಸ್ವೀಕರಿಸಿದ್ದರೆ ಪರಸ್ಪರರಲ್ಲಿ ಆದಾನ-ಪ್ರದಾನಗಳು ಬಳೆದು ಬಂದು ತೀರ ತುಸು ಅವಧಿಯಲ್ಲಿ ಭಾರತೀಯರ ಈಪ್ಸಿತ ಸ್ವಾತಂತ್ರ್ಯವು ಪ್ರಾಪ್ತವಾಗುವದೆಂದು ದಿವ್ಯದೃಷ್ಟಿಯಿಂದ ಕಂಡ ಶ್ರೀ ಅರವಿಂದರು ಹೇಳಿ ನೋಡಿದರು. ಭಾರತ ಯುದ್ಧದ ಕಾಲಕ್ಕೆ "ಕೌರವರನ್ನೆಲ್ಲ ನಾನೀಗಲೇ ವಧಿಸಿದ್ದೇನೆ. ನೀನು ನಿಮಿತ್ತಮಾತ್ರಕ್ಕೆ ಅವರನ್ನು ಸಂಹರಿಸು" ಎಂದು ಶ್ರೀ ಕೃಷ್ಣ ಪರಮಾತ್ಮನು ಅರ್ಜುನನಿಗೆ ಹೇಳಿದಂತೆ "ಭಾರತಕ್ಕೆ ಸ್ವಾತಂತ್ರ್ಯ ಸಿಕ್ಕು

ಬಹಳ ದಿನವಾಗಿದೆ. ಅದಿನ್ನು ಪ್ರಶ್ನೆಯಾಗಿ ಉಳಿದೇ ಇಲ್ಲ. ನಿಮಿತ್ತ ಮಾತ್ರಕ್ಕೆ ಅದನ್ನು ಪಡೆಯುವಂತೆ ನಟಿಸಬೇಕಾಗಿದೆ" ಎನ್ನುವವರ ಮಾತನ್ನು ಬುದ್ಧಿಶಾಲಿಗಳು ಕೇಳಲಾರರು. ಆಯಿತು. ಕ್ರಿಪ್ಸರು ತಮ್ಮ ಜೊತೆಗಾರರೊಡನೆ ಮರಳಿದರು. ಕೊಡುವವರು ಕೊಟ್ಟಷ್ಟು ತೆಗೆದು ಕೊಳ್ಳುವುದು ನ್ಯಾಯವೇ, ಬೇಡಿದಷ್ಟು ಕೊಡಬೇಕೆನ್ನುವುದು ನ್ಯಾಯವೇ ಎಂಬ ಪ್ರಶ್ನೆಯು ಪ್ರಶ್ನೆಯಾಗಿ ನಿಂತಿತು. ಕ್ರಿಪ್ಸರು ಮರಳಿದ್ದಕ್ಕೆ ಹೆಚ್ಚು ಕೊಡುವದಿಲ್ಲವೆಂದೂ, ಭಾರತೀಯರು ಆ ಯೋಜನೆಯನ್ನು ತಿರಸ್ಕರಿಸಿದ್ದಕ್ಕೆ ಸಂಪೂರ್ಣ ಪಡೆದೇ ತೀರುವೆವೆಂದೂ ಅರ್ಥವಾಯಿತು. ಲಖನೌದಲ್ಲಿ ಅವಸರ ಅವಸರವಾಗಿ ಸೇರಿದ ರಾಷ್ಟ್ರಸಭೆಯಿಂದ 'ಚಲೇಜಾವ್' ಚಳವಳಿಯು ಜನ್ಮಿಸಿತು. ದೇಶ ದೇಶಾಂತರವೆಲ್ಲವೂ ಚಲೇಜಾವ ಚಳವಳಿಯ ಓಡಾಟಕ್ಕೆ ಈಡಾಯಿತು. ಭಾರತ ಜನಾಂಗವು ಸಿಟ್ಟಿಗೆದ್ದು ತನ್ನ ಅಂಗೋಪಾಂಗ ಗಳನ್ನು ತಾನೇ ಕಚ್ಚಿಕೊಂಡಂತೆ, ತನ್ನ ತಲೆಗೂದಲನ್ನು ತಾನೇ ಕಿತ್ತು ಕೊಂಡಂತೆ ಆಗಿಬಿಟ್ಟಿತೆಂದು ಕೆಲವರು ಅಂದು ಕುಳಿತರು. ಆ ಕಾಲಕ್ಕೆ ಭಾರತೀಯರ ಅನೇಕ ಪರಾಕ್ರಮದ ಶಕ್ತಿಗಳು ಪ್ರಕಟವಾದವು. ಬ್ರಿಟಿಶ ಸರಕಾರವು ಹೊರದೇಶದ ಹೋರಾಟದೊಡನೆ, ಒಳದೇಶದ ಕೋಲಾಹಲ ವನ್ನೂ ಸಹಿಸಿತು; ಸಾಗಿಸಿತು. ಮೇಲಿನಿಂದ ಸುರಿಯುವ ಗುಡುಗು ಸಿಡಿಲುಗಳ ಪ್ರಳಯಾಗ್ನಿಯಲ್ಲಿಯೂ, ಒಳಗಿನಿಂದೇಳುವ ಭೂಕಂಪ ಜ್ವಾಲಾಮುಖಿಗಳ ದಾವಾಗ್ನಿಯಲ್ಲಿಯೂ ಧೈರ್ಯವಾಗಿ ನಿಂತು, ತನ್ನ ಕರ್ತವ್ಯವನ್ನು ಮಾಡತೊಡಗಿತು. ನಿಜವಾಗಿ ಈ ಯುದ್ಧವು ಮಿತ್ರ ರಾಷ್ಟ್ರದವರಿಗೂ ಅಚ್ಚಿನರಾಷ್ಟ್ರದವರಿಗೂ ನಡೆಯಲಾರದೆ, ದೇವಾಸುರರಲ್ಲಿ ನಡೆದ ಯುದ್ಧವೆಂದೂ ಅಸುರರಿಗೆ ಅಪಜಯವಾಗುವಂತೆ ತ್ರಿಕರಣ ಪೂರ್ವಕವಾಗಿ ಆಶಿಸುವುದೇ ಮಾನವನ ಕರ್ತವ್ಯವೆಂದೂ ಈ ಪ್ರಸಂಗದಲ್ಲಿ ಕರ್ತವ್ಯಚ್ಯುತರಾಗಿ ಮೈಮರೆತು ಕುಳಿತರೆ, ಅನೇಕ ಶತಮಾನಗಳವರೆಗೆ ಮಾನವನು ಪ್ರಗತಿಯನ್ನು ಆಶಿಸಲೇ ಬಾರದೆಂದೂ ತ್ರಿಕಾಲಜ್ಞಾನಿಗಳಾದ ಶ್ರೀ ಅರವಿಂದರು ಉದ್ಘೋಷಿಸಿದರು. ಋಷಿವಂಶಜರಾದ ಭಾರತೀಯರಿಗೆ ಆಗ ಆ ಅಮರವಾಣಿಯು ಕೇಳಿಸಲಿಲ್ಲ. ಕೇಳಿಸಿದವರಿಗೆ ಅರ್ಥವಾಗಲಿಲ್ಲ ವೆನ್ನುವಂತೆ ಆ ಕಾಲದ ಪರಿಸ್ಥಿತಿಯಿತ್ತೆಂದು ಹೇಳಬಹುದು.

ಹಿಟ್ಲರ ಮುಸೋಲಿನಿಯರು ಫ್ರಾನ್ಸಿನಲ್ಲಿ ಗಳಿಸಿದ ಗೆಲವು, ಪೋಲಂಡ ಮೊದಲಾದ ಭಾಗಗಳಲ್ಲಿ ದೊರಕಿಸಿದ ಯಶಸ್ಸು, ರಶಿಯದಲ್ಲಿ ಏರಿಹೋಗುವ ಚಲಕ ಇವನ್ನೆಲ್ಲ ಮನದಂದರೆ, ಮಹಾಯುದ್ಧವು ಶೀಘ್ರ ಮುಗಿಯುವ ದೆಂದೂ, ಜಗತ್ತು ಹಿಟ್ಲರನ ಪಾದಾಕ್ರಾಂತವಾಗಿ ಬಿಟ್ಟಿತೆಂದೂ, ಅತ್ತ ಹಿಟ್ಲರನು ಧುಮುಕಿಬಂದು, ಇತ್ತ ಜಪಾನರು ಏರಿಬಂದು ಭಾರತಸ್ವಾತಂತ್ರ್ಯವನ್ನು ಸುಗಮಗೊಳಿಸುವರೆಂದೂ ಚಲೇಜಾವ ಚಳವಳಿಯ ಯೋದ್ಧರಿಗೆ ಮನವರಿಕೆಯಾಯಿತು. ಆದರೆ ರಶಿಯದಲ್ಲಿ ಹಿಟ್ಲರನನ್ನು ಒಮ್ಮೆಲೆ ತಡೆಗಟ್ಟಲು ಒಂದು ಅಪೂರ್ವವಾದ ಶಕ್ತಿಯು ಸ್ಟ್ಯಾಲಿನನನ್ನು ಆಪರಿಸಿ ನಿಂತಂತಾಯಿತು. ಅಲ್ಲಿಯಿಂದ ಹಿಟ್ಲರನ ಹಿಂದೋಟಕ್ಕೆ ಆರಂಭವಾಯಿತೆನ್ನಬೇಕು. ಮಹಾಯುದ್ಧದ ಪ್ರಳಯಾಗ್ನಿಗೆ ಆಹುತಿಯಾಗದೆ ಜಗತ್ತಿನ ಯಾವಭಾಗವೂ ಉಳಿಯಲಿಲ್ಲ. ಧರ್ಮವಂಶಜರಾದ ಭಾರತೀಯರ ಕೂದಲನ್ನು ಸಹ ಕೊಂಕಿಸುವ ಸಾಮರ್ಥ್ಯವು ಆ ಪ್ರಳಯಾಗ್ನಿಗೆ ಇರಲಿಲ್ಲನೇನೋ ! ಆದರೆ ಚಲೇಜಾವದಿಂದ ಒಳದೇಶದಲ್ಲಿ ಎಷ್ಟು ಅನಾಹುತವಾಯಿತೋ ಅಷ್ಟೇ ಅನಾಹುತವು ಭಾರತಕ್ಕಾದದ್ದು. ಲೋಕವ್ಯಾಪಿಯಾಗಿ ನಿಂತ ಹಿಟ್ಲರನ ದೈತ್ಯಶಕ್ತಿಯು ಸಂಕುಚಿತವಾಗುತ್ತ ಆಗುತ್ತ ಜರ್ಮನಿಯ ಮಟ್ಟಿಗೂ, ಆ ಮೇಲೆ ಹಿಟ್ಲರನೆಂಬ ವ್ಯಕ್ತಿಯ ಮಟ್ಟಿಗೂ ನಿಂತು ಅಲ್ಲಿಂದ ಅಲಕ್ಷನೇ ತನ್ನ ಮೂಲಸ್ಥಾನಕ್ಕೆ ಜಿಗಿಯಿತು. ಮುಸೋಲಿನಿಯಂತೂ ಅಷ್ಟರಲ್ಲಿಯೇ, ತಾನು ನಿರ್ಮಿಸಿದ ಅನುಯಾಯಿಗಳಿಂದಲೇ ಹೀಗಳೆಯಲ್ಪಟ್ಟು ಜೀವಯಾತ್ರೆಯನ್ನು ಕೊನೆಗಾಣಿಸಿದ್ದನು. ಅಂತೂ ಮಹಾಯುದ್ಧವು ಮುಗಿದು, ಮಾನವನು ಮಹಾಮೃತ್ಯುವಿನ ದವಡೆಯೊಳಗಿಂದ ಅನೇಕ ಸಾವಿರವರುಷಗಳ ಮಟ್ಟಿಗೆ ಅಮರನಾಗಿ ನಿಂತಂತಾಯಿತೆಂದು ಹೇಳಬಹುದು. ಅಂದೇ ಮುಗಿಲು ಮಿನುಗಿತು; ಅಂತರಿಕ್ಷವು ಕಳೆಗೊಂಡಿತು; ಭೂಮಿಯು ನಿಬ್ಬೆರಗುಗೊಂಡಿತು.

ಕ್ರಿಪ್ಸಯೋಜನೆಯನ್ನು ಭಾರತೀಯರು ಅಲ್ಲಗಳೆದರೂ, ನಿಸರ್ಗ ನಿಯಮಾನುಸಾರವಾಗಿ ಬ್ರಿಟಿಶರಲ್ಲಿ ವರ್ಧಿಸುತ್ತಿರುವ ಸ್ನೇಹಬುದ್ಧಿಯು, ವಾವೆಲ್ ಯೋಜನೆಯನ್ನು ಭಾರತದ ಮುಂದೆ ಚಾಚಿತು. ಅದು ಸಹ ಕ್ರಿಪ್ಸ ಯೋಜನೆಯಂತೆಯೇ ಸ್ವೀಕರಿಸಲು ಯೋಗ್ಯವಿತ್ತೆಂದೂ, ಅದಕ್ಕಿಂತಲೂ ತುಸುಮಟ್ಟಿಗೆ ಪ್ರಗತಿಪರವೇ ಆಗಿತ್ತೆಂದೂ ಹೇಳುತ್ತಾರೆ. ಆದರೇನು?

ಆದೂ ಕ್ರಿಪ್ಸಯೋಜನೆಯ ಪುನರಾವೃತ್ತಿಯಂತೆ ತೋರಿದ್ದು ಸುಳ್ಳಲ್ಲ. ಕ್ರಿಪ್ಸಯೋಜನೆಯಲ್ಲಿ ಸೇನೆ-ಬೊಕ್ಕಸಗಳ ಕೀಲಿಗಳೆರಡೂ ಬ್ರಿಟಿಶರ ಕೈಯಲ್ಲಿ ಉಳಿಯುತ್ತಿದ್ದವೆಂದೂ ವಾವೆಲ್ ಯೋಜನೆಯಲ್ಲಿ ಬೊಕ್ಕಸದ ಕೀಲಿಯೊಂದು ಮಾತ್ರ ಬ್ರಿಟಿಶರ ಕೈಯಲ್ಲಿ ಉಳಿಯುತ್ತಿತೆಂದೂ ಹೇಳುತ್ತಾರೆ. ಆದರೆ ಸಂಪೂರ್ಣ ಸ್ವಾತಂತ್ರ್ಯವನ್ನು ಅಪೇಕ್ಷಿಸುವವರಿಗೆ ಎಷ್ಟು ಏನಿದ್ದರೂ ಕೊರತೆಯೆನಿಸಿದ್ದರಲ್ಲಿ ಆಶ್ಚರ್ಯವೇನು? ಎರಡೂ ಯೋಜನೆಗಳನ್ನು ಒದೆದುಬಳಿಸಿ ಚಂಡಿತನ ಹಚ್ಚಿದ ಭಾರತವನ್ನು ಹಾದಿಗೆ ತರುವುದಕ್ಕೆ ಸೇನಾಪತಿಯಾಗಿದ್ದ ಮೌಂಟಬ್ಯಾಟನ್‌ರನ್ನು ಭಾರತದ ವೈಸರಾಯನೆಂದು ನಿಯಮಿಸಿ ಪಾರ್ಲಮೆಂಟು ತನ್ನ ಚಾಣಾಕ್ಷ ತನವನ್ನು ಉಪಯೋಗಿಸಿತು. ಕೋಳಿನ ಉರಲು ಕೊರಳಸರವಾದಂತೆ ಮೌಂಟಬ್ಯಾಟನರ ಯುಕ್ತಿ ಪ್ರಯುಕ್ತಿಗಳು ಭಾರತೀಯರ ಮನವೊಲಿಸಿದ ವಾದರೂ, ಮುಸಲ್ಮಾನ ಬಂಧುಗಳ ಮನವೊಡಿಸಿದವು. ಸ್ವಾತಂತ್ರ್ಯ ಪ್ರಾಪ್ತಿಗೆ ಕೈಚಾಚುವಷ್ಟರಲ್ಲಿ ಭಾರತವು ಒಡೆದು ಹೋಗಿತ್ತು. ಒಂದು ಹಿಂದುಸ್ತಾನ; ಇನ್ನೊಂದು ಪಾಕಿಸ್ತಾನ. ಅಶೋಕನಕಾಲದಿಂದಲೂ ಸ್ವಾತಂತ್ರ್ಯವನ್ನು ಕಾಣದ ಭಾರತವು, ಅಂದಿನಿಂದಲೂ ಸ್ವಾತಂತ್ರ್ಯದ ಪರಿಚಯವನ್ನರಿಯದ ಭಾರತೀಯರು ದೊರೆತ ಸ್ವಾತಂತ್ರ್ಯವನ್ನು ಹರ್ಷ ಚಿತ್ತದಿಂದ ಸ್ವೀಕರಿಸಿ, "ಭಾರತ ಮಾತಾಕೀ ಜಯ್" ಎಂದು ಉಗ್ಗಡಿಸಿದರು. ಅಂದು ೧೯೪೭ನೆಯ ಆಗಸ್ಟ ೧೫ನೆಯ ತೇದಿ. ಅಂದು ಶ್ರೀ ಅರವಿಂದರ ಜನ್ಮ ತಾರೀಖು ಅಷ್ಟೇ ಅಲ್ಲ; ಯೋಗೀಶ್ವರರ ೭೫ನೆಯ ಜನ್ಮ ತಾರೀಖು. ಇದೇನು ಆಕಸ್ಮಿಕ ಘಟನೆಯೇ? ಅಲ್ಲ. ಇದರಲ್ಲೇನೋ ಗೂಢರಹಸ್ಯವಿದೆಯೆಂದು ಅವರೇ ಹೇಳುತ್ತಾರೆ. ಅಂದು ಅಖಿಲಭಾರತದಲ್ಲಿ —ಹಾಗಲ್ಲ-ಹಿಂದುಸ್ತಾನ – ಪಾಕಿಸ್ಥಾನಗಳೆರಡರಲ್ಲಿಯೂ ಅತ್ಯಪೂರ್ವವಾದ ಉತ್ಸವವು ಜರುಗಿತು. ಅದೆಂಥ ಮಹಾಪರ್ವ! ಮ. ಗಾಂಧೀಜಿ ಅವರು ಅಂದು ಸ್ವಾತಂತ್ರ್ಯೋತ್ಸವದ ದಿವಸ ಸ್ವಾತಂತ್ರ್ಯದ ಬಿರುಕಿನಂತೆ ಭಯಾನಕ ವಾಗಿರುವ ಹಿಂದು-ಮುಸ್ಲಿಮರ ಹೃದಯದೊಡಕನ್ನು ಮಾಯಿಸುವ ಎತ್ತು ಗಡೆಯಲ್ಲಿ ತೊಡಗಿದ್ದಾರೆ. ಇತ್ತ ಪಾಂಡಿಚೇರಿಯಲ್ಲಿ ಹರಕು-ಮುರಕು ಸ್ವಾತಂತ್ರ್ಯವೆಂದೆಣಿಸಿದ್ದರೂ ಭಾರತವನ್ನು ಅಖಂಡಗೊಳಿಸುವ "ಮಾತ್ಯ

ಧ್ವಜ" ವನ್ನೇರಿಸಿ ವಂದೇ ಮಾತರಂ ಗೀತೆಯನ್ನು ಹಾಡಿ, ಇದೀಗ ರಾಷ್ಟ್ರಗೀತದ ಸಾರ್ಥಕ್ಯವನ್ನು ಮನಗಾಣಿಸಿಕೊಡಲಾಯಿತು.

ಸ್ವಾತಂತ್ರ್ಯವು ಭಾರತೀಯರೆಲ್ಲರಿಗೂ ಸಿಕ್ಕಿತು. ಎಂದು ? ೧೯೪೭ನೇ ಆಗಸ್ಟ ೧೫ನೇ ಮಧ್ಯರಾತ್ರಿ. ಮರುದಿವಸದ ಜೀವನಕ್ಕೂ, ಮುನ್ನಾದಿವಸದ ಜೀವನಕ್ಕೂ ಏನು ಹೆಚ್ಚುಕಡಿಮೆಯೆಂಬುದು ಯಾರಿಗೂ ಗೋಚರವಾಗ ಲೊಲ್ಲದೆಂದು ಸಾಮಾನ್ಯರ ಎಣಿಕೆ. ದೊರೆತ ಸ್ವಾತಂತ್ರ್ಯವು ಹರಕು-ಮುರಕು, ಜಾತ್ಯತೀತವಾದ ರಾಷ್ಟ್ರಸಭೆಯು ಜಾತಿಭಾವನೆಯ ಪಾಕಿಸ್ತಾನಕ್ಕೆ ಅದೆಂತು ಒಪ್ಪಿತೆಂದು ಕಡೆಗೆ ನಿಂತವರು ಗೊಣಗುಟ್ಟಿದರು. ಸ್ವಾತಂತ್ರ್ಯವು ಅದೆಂಥದೇ ಇರಲೊಲ್ಲದೇಕೆ, ಕೊಡುವವರು ಕೊಟ್ಟು ಕಡೆಗಾಗಲಿ ಎಂದರು ಗಾಂಧೀಜಿ ಬ್ರಿಟಿಶರ ಕೊನೆಯ ವೈಸರಾಯರಾದ ಮೌಂಟ ಬ್ಯಾಟನ್ನರು ಸ್ವತಂತ್ರಹಿಂದುಸ್ತಾನದ ಪ್ರಥಮ ವೈಸರಾಯರಾದರು. ಪಾಕಿಸ್ತಾನಕ್ಕೆ ಅದರ ಜನಕರಾದ ಬ್ಯಾ. ಜಿನ್ನಾರವರೇ ಗವರ್ನರ ಜನರಲ್ಲ ರಾದರು. ದೇಶೀಯ ಸಂಸ್ಥಾನಿಕರೆಲ್ಲರೂ ರಾಷ್ಟ್ರದ ಈ ಮಾರ್ಪಾಡಿನಿಂದ ಸ್ವತಂತ್ರರಾದೆವೆಂದು ನೈಮರೆತರು. ಭಾರತವು ಎರಡು ಹೋಳಲ್ಲ; ಸಾವಿರ ಹೋಳಾದಂತಾಯಿತು. ಸಾವಿರ ಹೋಳಾದ ಮನೆ, ನಾಲ್ವತ್ತು ಕೋಟಿ ಬುದ್ಧಿಯುಳ್ಳ ಮನೆಬಳಗ, ಕವಡು ಗಂಟಕತನದ ದಾಯಾದಿ, ಹುಂಜಿನ ಕಾದಾಟ ನೋಡಲು ಕುಳಿತ ಸಾಹೇಬರು....ಇಂತಹ ಮನೆತನ ವನ್ನು ಸರಿಯಾದ ದಾರಿಗೆ ತರುವ, ನಡೆಸಿಕೊಂಡು ಹೋಗುವ ಜವಾಹರ ಲಾಲರು ಭಾರತದ ಮುಖ್ಯ ಮಂತ್ರಿಗಳಾದರು. ಸಿಗತಕ್ಕಷ್ಟು ಪಾಲು ಸಿಗಲಿಲ್ಲೆಂದು ಪಾಕಿಸ್ತಾನವು, ಸ್ವತಂತ್ರ ದೇಶಕ್ಕಿರತಕ್ಕ ಸೌಕರ್ಯಗಳೆಲ್ಲ ತಮಗೆ ಸಿಗಬೇಕೆಂದು ಸಂಸ್ಥಾನಗಳು, ಭಾರತವನ್ನು ಒಡೆಯುವದಕ್ಕೆ ಒಪ್ಪಿಕೊಂಡಿರೇಕೆಂದು ಹಿಂದುಗಳು ತಲೆಕೆಡಿಸಿಕೊಂಡು ಮನಸ್ಸಿಗೆ ಬಂದಹಾಗೆ ವರ್ತಿಸ ತೊಡಗಿದರು. ಹಿಂದುಗಳು ಮುಸಲ್ಮಾನರ ಕ್ರೌರ್ಯಕ್ಕೆ ತುತ್ತಾ ದುದನ್ನು ಒತ್ತಟ್ಟಿಗೆ ನೋಡಿದರೆ ಮುಸಲ್ಮಾನರು ಹಿಂದುಗಳ ಪ್ರತಿ ಸೇಡಿಗೆ ಈಡಾದುದನ್ನು ಇನ್ನೊತ್ತಟ್ಟಿಗೆ ನೋಡುತ್ತೇವೆ. ಮನೆತನವುಳ್ಳವರು ಅದನ್ನು ಕಳಕೊಂಡರು; ಹೆಣ್ಣುಮಕ್ಕಳು ಹದುಳಗೆಟ್ಟರು; ಕೂಸುಗಳು ಇರುವೆಗಳಂತೆ ಒರಿಸಲ್ಪಟ್ಟರು. ಆಸ್ತಿ ಕಳಕೊಂಡವರು ಒತ್ತಟ್ಟಿಗೆ ಇರಲಿ; ಅಂಥ ನಿರಾಶ್ರಿತರ ವ್ಯವಸ್ಥೆ ಮಾಡುವ ಬೇರೊಂದು ಹೊರೆಯು ಸರಕಾರದ

ತಲೆಯ ಮೇಲೆ ಬಂದಿತು. ಮುಸ್ಲೀಮ ಬಂಧುಗಳ ಸ್ವೈರಾಚಾರಕ್ಕೆ ಅವರ ಮುಂದಾಳು ಪ್ರೋತ್ಸಾಹವಿತ್ತಂತೆ ನಮ್ಮ ಮುಂದಾಳು ಉತ್ತೇಜನ ಕೊಡದೆ ತಿರುಗಿ ತಡೆಯನ್ನುಂಟುಮಾಡುವನಲ್ಲಾ ! ನಮ್ಮ ಮುಂದಾಳೇ ನಮ್ಮ ಕಾಲ್ತೊಡಕು; ಕಾಲ್ತೊಡಕು ಕಡೆಗಾದಾಗಲೇ ನಮ್ಮ ಮುಂಗಾಲಿಗೆ ಜೋರು ! ಎನ್ನುವ ವಿಚಾರವು ಹಗುರಾಗಿ ಗೊಬ್ಬರದ ಬೆಂಕಿಯಂತೆ ಹೊತ್ತು ಹೊತ್ತುತ್ತ ಒಮ್ಮೆ ಮ. ಗಾಂಧೀಜಿ ಅವರ ಪ್ರಾರ್ಥನಾ ಸಭೆಯಲ್ಲಿ ಬಾಂಬು ಹಾರಿ ಪ್ರಕಟಗೊಂಡಿತು. " ಇದೇನು ಅಂಥದೊಡ್ಡ ಮಾತು ? ಗಾಂಧೀಜಿಯಂಥ ಅಜಾತ ಶತ್ರುವಿಗೂ ವೈರಿಗಳೇ ? " ಎಂದುಕೊಂಡು ಮೈಮರೆಯುವಷ್ಟರಲ್ಲಿ ಮ. ಗಾಂಧೀಜಿಯವರ ಕೊಲೆಯ ಸುದ್ದಿಯು ಮಿಂಚಿನ ವೇಗದಿಂದ ದೇಶವವನ್ನೆಲ್ಲ ವ್ಯಾಪಿಸಿತು. " ಸ್ವಾತಂತ್ರ್ಯವನ್ನು ತಂದಿತ್ತ ನೈಸರ್ಗಿಕ ಜ್ಯೋತಿಯು ಅದೇ ಇತ್ತು; ಅದಿಂದು ನಮ್ಮ ಕೈ ಬಿಟ್ಟು ಭಾರತೀಯರನ್ನು ನಿರ್ಗತಿಕರನ್ನಾಗಿ ಮಾಡಿತು. " ಎಂದು ಭರತಖಂಡವು ಆಕ್ರೋಶಪಟ್ಟಿತು. ಜಗತ್ತಿಗೆ ಮಾರ್ಗದರ್ಶಕವಾದ ಜಗಜ್ಯೋತಿಯು ಕಣ್ಮರೆಯಾಯಿತೆಂದು ವಿಶ್ವವು ಕಂಗೆಟ್ಟಿತು. "ಸ್ವಾತಂತ್ರ್ಯ ! ಸ್ವಾತಂತ್ರ್ಯ' ವೆನ್ನುವ ಭಾರತಕ್ಕೆ ಅದು ಸಿಕ್ಕಿತಾದರೂ ಅದಕ್ಕಿಂತ ಬಿಕ್ಕಟ್ಟು ಭಾರತಕ್ಕೆ ಉಂಟಾಯಿತಲ್ಲಾ ! ಭಾರತಕ್ಕೆ ಸ್ವಾತಂತ್ರ್ಯವಷ್ಟೇ ಗುರಿಯೇ ? ಎನ್ನುವ ಪ್ರಶ್ನೆಯು ಮತಿವಂತರ ತಲೆಯಲ್ಲಿ ಎದ್ದು ನಿಂತಿತು. ಆದಕ್ಕೆ ಸ್ವಾತಂತ್ರ್ಯವು ಭಾರತಕ್ಕೊಂದು ಸಾಧನೆ ಮಾತ್ರ. ಅದರಿಂದ ಭಾರತದ ಸ್ಥಾನವು ಗದ್ದುಗೆ ಗೊಳ್ಳಬೇಕಾಗಿದೆ, ಎಂಬ ಪ್ರವಾದವು ಲಭಿಸಿತು.

ಪರತಂತ್ರವೂ ದರಿದ್ರವೂ ಆದ ಹಿಂದುಸ್ತಾನದ ರಾಷ್ಟ್ರಧ್ವಜದಲ್ಲಿ ಬಡವರ ಕಾಮಧೇನುವೆನ್ನಿಸಿಕೊಳ್ಳುವ ರಾಟೆಯು ಚಿತ್ರಾಂಕಿತವಾಗಿದ್ದರೆ, ಸ್ವತಂತ್ರವೂ ಅಂತೆಯೇ ಸಂಪನ್ನವೂ ಆದ ಹಿಂದುಸ್ತಾನದ ರಾಷ್ಟ್ರಧ್ವಜದಲ್ಲಿ ಅಶೋಕಚಕ್ರವು ಕಂಗೊಳಿಸಿತು. ನೂಲುವರಾಟೆಯು ಅಶೋಕ ಚಕ್ರವಾಗಿ ಮಾರ್ಪಟ್ಟಿತು. ತಿರುಕನ ಕೈಯೊಡವು ಪರಸುಬಟ್ಟಲವಾಯಿತೆನ್ನೋಣ. ಅಶೋಕ ಚಕ್ರವರ್ತಿಯ ಸಾಮ್ರಾಜ್ಯದ ನೀತಿ, ಪ್ರಜಾಸೌಖ್ಯ, ಸುಭಿಕ್ಷಗಳು ೧೯೪೭ನೆಯ ಅಗಸ್ಟ ೧೫ರಿಂದ ಮತ್ತೆ ಆರಂಭವಾದವೆಂದರ್ಥ. ಹಲವು ಜನ ವಿಶಾಲಮತಿಗಳಾದ ರಾಷ್ಟ್ರಧುರೀಣರಿಗೆ ಕಾಣಿಸಿಕೊಂಡ ಅಶೋಕ

ಚಕ್ರವುಳ್ಳ ರಾಷ್ಟ್ರಧ್ವಜವು ಜಗದ ಶಾಂತಿಗಾಗಿ ಹೋರಾಡುವೆನೆಂದು ಎದೆತಟ್ಟಿ ಸಾರತೊಡಗಿತು. ಆದರೆ ಈ ಸ್ವಾತಂತ್ರ್ಯವನ್ನು ಕುರಿತು ಶ್ರೀ ಅರವಿಂದರು ಪಡುವ ಅಭಿಪ್ರಾಯವನ್ನಿಷ್ಟು ಲಕ್ಷಿಸುವಾ. "ಹಿಂದುಸ್ಥಾನಕ್ಕೆ ದೊರೆತುದು ಹರಕು-ಮುರುಕು ಸ್ವಾತಂತ್ರ್ಯ. ಹಿಂದುಸ್ಥಾನವು ಅಖಂಡವಾಗಲೇ ಬೇಕು. ಹಾಗೆ ಆಗದಿದ್ದರೆ ಈಗ ದೊರೆತ ಸ್ವಾತಂತ್ರ್ಯಕ್ಕೆ ಏನೂ ಬೆಲೆಯಿಲ್ಲ. ರಾಷ್ಟ್ರನೀತಿಯೆಂದಾಗಲಿ, ನೆರೆ ನಾಡೆಂದಾಗಲಿ ಪಾಕಿಸ್ಥಾನ-ಹಿಂದುಸ್ಥಾನಗಳು ಅಭಿನ್ನವೆನಿಸುವಂತೆ ವರ್ತಿಸತಕ್ಕದ್ದು. ಇದನ್ನು ಸಾಧಿಸುವುದಕ್ಕೆ ಇನ್ನಾವುದಾದರೂ ಉಪಾಯವಿದ್ದರೆ ಅವನ್ನು ಪ್ರಯೋಗಿಸತಕ್ಕದ್ದು. ಒಟ್ಟಾಗಿ, ಭಾರತವು ಅಖಂಡವಾಗಲೇ ಬೇಕು. ಆಗಿಯೇ ತೀರುವದು." — "ನೀಲವಾದ ಗಗನಮಂಡಲದ ಆಳದಿಂದ ಹೊರಟ ಐಕ್ಯತತ್ವವೊಂದು ಹೊರಟು ಪೃಥ್ವಿಯನ್ನು ಸಮೀಪಿಸುತ್ತಿದೆ." ಎಂಬ ಪೂರ್ವಚಿಹ್ನವನ್ನು ಚಿತ್ರಿಸಿ, ಅದು ಭಾರತದಲ್ಲಿಯೇ ಇಳಿಯುವದೆಂದು ಶ್ರೀ ಮಾತಾಜಿ ಸೂಚಿಸಿದ್ದಾರೆ. ಲೌಕಿಕ ದೃಷ್ಟಿಗೆ ಕಾಣಿಸಿಕೊಂಡ ಅಶೋಕ ಚಕ್ರವು ಶ್ರೀ ತಾಯಿಯವರ ಅಲೌಕಿಕವಾದ ದಿವ್ಯದೃಷ್ಟಿಗೆ ಬೇರೊಂದು ವಿಧವಾಗಿ ಕಾಣಿಸಿಕೊಳ್ಳುವುದು ಸಹಜವೇ ಸರಿ. ಒಂದು ವಸ್ತು; ಇನ್ನೊಂದು ಅದರ ನೆರಳು. ನೀಲವಾದ ಬಣ್ಣದಲ್ಲಿ ಹೊಂಬಣ್ಣದ ಚಕ್ರವುಳ್ಳ ಧ್ವಜಕ್ಕೆ ಮಾತೃಧ್ವಜವೆಂಬ ಹೆಸರು. ಆ ಧ್ವಜದ ಕೆಳಗೆ ಜಗತ್ತು ಐಕ್ಯ-ಏಕಮತ್ಯಗಳನ್ನು ಸ್ಥಾಪಿಸಬಲ್ಲದೆಂದು ಶ್ರೀ ತಾಯಿಯವರು ಸಾರಿಸಾರಿ ಹೇಳುತ್ತಾರೆ." "ಹಿಂದುಸ್ಥಾನವು ಅಶೋಕ ಚಕ್ರದ ಧ್ವಜವನ್ನೂ, ಆಧ್ಯಾತ್ಮಿಕರಿಗೆ 'ಮಾತೃಧ್ವಜ' ವನ್ನೂ ನೀಡಿ ಲೌಕಿಕದಿಂದ ಮೃತ್ಯುವನ್ನು ಗೆದ್ದು, ಅಧ್ಯಾತ್ಮದಿಂದ ಅಮರತ್ವವನ್ನು ಪಡೆಯಿರಿ" ಎಂದು ಸಾರಿದಂತಾಯಿತು. ಶ್ರೀ ತಾಯಿಯವರು ಭಾರತದ ಸಲುವಾಗಿ ಪ್ರಾರ್ಥಿಸಿದ ಒಂದು ಪ್ರಾರ್ಥನೆಯಲ್ಲಿ-ಸ್ವಾತಂತ್ರ್ಯವನ್ನು ಪಡೆದ ಭಾರತವು ಅಂತರ್ರಾಷ್ಟ್ರೀಯ ಪರಿಷತ್ತಿನಲ್ಲಿ ಯೋಗ್ಯಮನ್ನಣೆಯನ್ನು ಪಡೆಯಲೆಂದು ಹಾರಯಿಸಿದ್ದಾರೆ. ಅದರ ಫಲವಾಗಿಯೇ ಎನ್ನುವಂತೆ ಶ್ರೀಮತಿ ವಿಜಯಲಕ್ಷ್ಮಿಪಂಡಿತರು ಪರರಾಷ್ಟ್ರ-ರಾಯಭಾರಿಯಾಗಿ ಗಳಿಸಿದ ಯಶಸ್ಸೂ, ಭಾರತಮಂತ್ರಿ ಜವಾಹರಲಾಲರು ಐರೋಪ ಅಮೇರಿಕಾ ಪ್ರವಾಸದಲ್ಲಿ ದೊರಕಿಸಿದ ಕೀರ್ತಿಯೂ ಅಂತರ್ರಾಷ್ಟ್ರೀಯ ಮನ್ನಣೆಗೆ ಸಾಕ್ಷಿ.

ಮಹಾಯುದ್ಧದ ಪರಿಣಾಮದಿಂದ ಹಿಂದುಸ್ತಾನವು ಸ್ವಾತಂತ್ರ್ಯವನ್ನು ಪಡೆಯಿತು. ಜಾಗತಿಕ ಪ್ರಶ್ನೆಯಾಗಿ ಉದ್ಭವಿಸಿದ ಮಹಾಯುದ್ಧದ ಹಾಲಾಹಲದಲ್ಲಿ ಭಾರತಸ್ವಾತಂತ್ರ್ಯದ ಅಮೃತವು ಹೊರಹೊರಟಿತು. ಈ ಯಜ್ಞಕ್ಕೆ ಹಿಟ್ಲರ ಮುಸೋಲಿನಿಗಳು ಯಜ್ಞಪಶುವಿನಂತೆ ಆಹುತಿಯಾದರು. ಜಾಗತಿಕ ಪ್ರಶ್ನೆ ಮುಗಿದ ಬಳಿಕ ದೇಶದ ಪ್ರಶ್ನೆಯೆನ್ನುವಂತೆ ಹಿಂದುಸ್ತಾನದಲ್ಲಿ ಕಾಶ್ಮೀರದ ತೊಡಕು, ಹೈದರಾಬಾದ-ಜುನಾಗಡಗಳ ಸಮಸ್ಯೆ, ನರೇಂದ್ರರ ಪ್ರಶ್ನೆ ಇವು ತಲೆಯೆತ್ತಿದವು.— “ಜಾಗತಿಕ ಪ್ರಶ್ನೆ ಬಿಟ್ಟು ಹೋದಂತೆ ಈ ಪ್ರಶ್ನೆ-ಸಮಸ್ಯೆಗಳೂ ಬಿಟ್ಟು ಹೋಗುವವು” ಎಂದು ಪಾಂಡಿಚೇರಿಯ ಅಮರ ವಾಣಿಯು ಭವಿಷ್ಯ ನುಡಿಯಿತು. ಜುನಾಗಡದ ತೊಡಕನ್ನು ಹಾರಿಹೊಡೆದು, ಹೈದ್ರಾಬಾದದ ಗಹನವಾದ ದುರಂತಕ್ಕೆ ಕೈಹಾಕುವುದೊಂದೇ ತಡ, ಮಂತ್ರ ಹಾಕಿದಂತೆ ಎಲ್ಲವೂ ಪರಿಹಾರವಾಯಿತು. ಪುಂಡಗಾರನಾದ ಕಾಶೀಮು ರಝ್ವಿಯೂ, ಆತನ ರಜಾಕಾರ ಸೈನಿಕರೂ ಬಾಯಲ್ಲಿ ಹುಲ್ಲುಕಡ್ಡಿ ಹಿಡಿದರು. ಅದೇ ಗಳಿಗೆಯಲ್ಲಿ ಪಾಕಿಸ್ತಾನ-ಗವರ್ನರ ಜನರಲ್‌ರಾದ ಜಿನ್ನಾರವರು ತಮ್ಮ ಅವತಾರವನ್ನು ಮುಗಿಸಿದರು. ಹಲವು ತಿಂಗಳು ಕಾಶ್ಮೀರದಲ್ಲಿ ಪರ್ಯಾಯದಿಂದ ಪಾಕಿಸ್ತಾನ-ಹಿಂದುಸ್ತಾನಗಳೇ ಬಡಿದಾಡಿದರೂ ಕೊನೆಗೆ ಸಮಾಧಾನದ ಒಪ್ಪಂದವಾಯಿತು. ಸ್ವತಂತ್ರರಾಜರೆಂದು ತಿಳಿದುಕೊಂಡು ಪ್ರಜಾಕ್ಷೋಭೆಗೀಡಾದ ಅಸಂಖ್ಯಸಂಸ್ಥಾನಿಕರು ಉಪಮುಖ್ಯ ಮಂತ್ರಿಗಳಾದ ಸರದಾರ ವಲ್ಲಭಭಾಯಿಯವರ ವಿಲಯನ ಪದ್ಧತಿಗೆ ಒಲಿದು, ತಂತಮ್ಮ ರಾಜ್ಯಗಳನ್ನು ಹಿಂದುಸ್ತಾನಕ್ಕೆ ಜೋಡಿಸಿ ಬಿಟ್ಟರು. “ಧರ್ಮ ಹಾಗೂ ರಾಷ್ಟ್ರೀಯತ್ವ” ದಲ್ಲಿ ಶ್ರೀ ಅರವಿಂದರು ಭಾರತ ಐಕ್ಯಕ್ಕೆ ಅದರ ವಿಸ್ತಾರವೂ, ಅಸಂಖ್ಯ ಭಾಷೆಗಳೂ, ಹಿಂದುಮುಸಲ್ಮಾನರ ತೊಡಕೂ ಭಂಗ ತರುವವೆಂದು ಹೇಳಿ ವಾಹನ ಸೌಕರ್ಯದಿಂದ ವಿಸ್ತಾರಭಯವು ಅಳಿಯುವದೊಂದೂ, ರಾಷ್ಟ್ರಭಾಷೆಯೊಂದು ನಿರ್ಮಾಣವಾಗುವವರಿಂದ ಅಸಂಖ್ಯ ಭಾಷೆಗಳ ತೊಂದರೆ ತಪ್ಪುವದೆಂದೂ, ಅಖಂಡ ಭಾರತದ ದರ್ಶನ ಪಡೆದವರಿಂದ ಹಿಂದು-ಮುಸಲ್ಮಾನರ ತೊಡಕು ಬಿಚ್ಚುವುದೆಂದೂ ಹೇಳಿದ್ದಾರೆ. ಈ ತೊಡಕು ಬಿಡಿಸಿ ಸುಗಮಪಡಿಸಿಕೊಳ್ಳುವ ಹಂಬಲವು ಕೆಲವರಿಗಿದ್ದರೆ ಆ ತೊಡಕಿನ ಕಾರಣವನ್ನೇ ತೊಡೆದುಹಾಕುವುದು ಲೇಸೆಂದೆನ್ನುವ ವಿಚಾರವೂ

ಕೆಲವರದಿರುತ್ತದೆ. ಆದರೆ ಅಖಂಡಭಾರತದ ದರ್ಶನದ ಉಪಾಯದಿಂದ ಹಿಂದು-ಮುಸ್ಲಿಮ ಐಕ್ಯವು ಸುಗಮವಾಗುವದೆನ್ನುವ ಮಾತನ್ನೇ, 'ಮಾತೃಧ್ವಜ'ದ ಕೆಳಗೆ ನಾವೆಲ್ಲರೂ ಐಕಮತ್ಯವನ್ನು ಸ್ಥಾಪಿಸಬಲ್ಲೆವೆನ್ನುವ ಶ್ರೀ ಮಾತೃವಾಣಿಯಂತೆ 'ಮಾತೃಧ್ವಜ'ದ ಉಪಾಸನೆ ನಡೆದಿರುವಾಗ ಪರಸ್ಪರರಲ್ಲಿಯ ಭೇದಭಾವನೆಯು ಪರಿವರ್ತನ ಹೊಂದುವುದರಲ್ಲಿ ಸಂಶಯವಿಲ್ಲ.

ಜಾಗತಿಕ ಪ್ರಶ್ನೆಯು ಭಾರತಕ್ಕೆ ಸ್ವಾತಂತ್ರ್ಯವನ್ನಿತ್ತರೂ ಅದರೊಡನೆ ಭಾರತದಲ್ಲಿ ದ್ವೇಶಾತ್ಮಕ ಪ್ರಶ್ನೆಗಳನ್ನೆಬ್ಬಿಸಿತಷ್ಟೇ? ಆ ಕೋಲಾಹಲದಲ್ಲಿಯೂ ದೇಶದ ಹಿರಿಯರ ಆಹುತಿ ಯಾದುದರಿಂದಲೋ ಎನ್ನುವಂತೆ ದೇಶದ ಆಂತರಿಕ ಸಮಸ್ಯೆಗಳು ಸಡಿಲಾದವೆನ್ನುವಷ್ಟರಲ್ಲಿ ಪ್ರಾಂತಿಕ ಪ್ರಶ್ನೆಗಳೇಳತೊಡಗಿವೆ. ಪ್ರಾಂತೀಕರಣ ಭಾಷಾವಾರ ಪ್ರಾಂತರಚನೆ ಈ ತತ್ವಗಳನ್ನು ರಾಷ್ಟ್ರಸಭೆಯಲ್ಲಿ ಮಾನ್ಯಮುಖಂಡರು ಎಂದೋ ಒಪ್ಪಿಕೊಂಡಿದ್ದರೂ ಪ್ರಾಂತಾಭಿಮಾನದ ಗಡಿಬಿಡಿಯಲ್ಲಿ, ರಾಷ್ಟ್ರಾಭಿಮಾನವು ಎಲ್ಲಿ ಮಸಕಾಗುವದೋ ಎನ್ನುವ ಸಂಶಯ ಪಿಶಾಚಿಯು ಭಾರತಸರಕಾರದ ತಲೆಕೆಡಿಸಿ ನಿಂತಹಾಗಿದೆ. ತತ್ವವನ್ನೇನೋ ಒಪ್ಪಿದರೂ ಅದು ಕಾರ್ಯಕಾರಿಯಾಗುವುದಕ್ಕೆ ಅಡ್ಡಿಯನ್ನೊಡ್ಡಲಾಗುತ್ತಿದೆ. ಈ ಸಂಶಯ ಪಿಶಾಚಿಯು ಬಿಟ್ಟೋಡುವಂತೆ ಶ್ರೀ ಅರವಿಂದರು—ಭಾಷಾವಾರ ಪ್ರಾಂತರಚನೆಗೆ ಇದೀಗ ತಕ್ಕ ಸಮಯ ಬಂದಿದೆಯೆಂದೂ, ದೇಶದ ತುಂಬ ರಾಷ್ಟ್ರಾಭಿಮಾನ ಪಸರಿಸಿದ್ದರಿಂದ ಪ್ರಾಂತಾಭಿಮಾನವು ರಾಷ್ಟ್ರಾಭಿಮಾನಕ್ಕೆ ಆತಂಕಪಡಿಸಲಾರದೆಂದೂ ಹೇಳಿಕೆ ಕೊಟ್ಟಿದ್ದಾರೆ. ಇನ್ನೇನು? ಇಂದಿಲ್ಲ ನಾಳೆ, ಪ್ರಾಂತೀಕರಣವೆನ್ನಿರಿ, ಭಾಷಾವಾರ ಪ್ರಾಂತರಚನೆಯೆನ್ನಿರಿ ಆಗಿಯೇ ಬಿಡುತ್ತದೆ. ಯಾರ ಪ್ರೇರಣೆಯಿಂದಲೋ ೪-೬ವರುಷ ಮೊದಲೇ, ಅಂದರೆ ಪಾಕಿಸ್ತಾನದ ಪ್ರಶ್ನೆಯೇಳುವದಕ್ಕಿಂತ ಮುಂಚಿತವಾಗಿಯೇ ಪಾಕಿಸ್ತಾನ ಕೊಟ್ಟುಬಿಡಿರೆಂದು ನುಡಿದು, ರಾಷ್ಟ್ರದ ಮುಖಂಡರೊಡನೆ ಭಿನ್ನ ಮತವನ್ನು ಪದರಲ್ಲಿ ಕಟ್ಟಿಕೊಂಡಿದ್ದ ಚಕ್ರವರ್ತಿ ರಾಜಗೋಪಾಲಾಚಾರ್ಯರು ಸ್ವತಂತ್ರಭಾರತ ಭಾರತೀಯ ಪ್ರಥಮ ಗ. ಜನರಲ್ ಆಗಿರುವದೂ, ಶ್ರೀ ಸರೋಜನಿದೇವಿಯವರು ಯುಕ್ತಪ್ರಾಂತಕ್ಕೆ ಗವರ್ನರ ಆಗಿ ಹೋದುದೂ

ಆದರಂತೆ ಅಖಿಲಭಾರತದ ಪ್ರಮುಖಸೇನಾಪತಿಯೆಂದು ಶ್ರೀ ಕರಿಯಪ್ಪ ನವರು ನೇಮಕಗೊಂಡಿರುವುದೂ ಭಾರತೀಯರೂ, ಕನ್ನಡಿಗರೂ ಆದ ನಮ್ಮೆಲ್ಲರಿಗೂ ಅಭಿಮಾನದ ಮಾತೇ ಸರಿ. ಹೀಗೆ ಪ್ರಾಂತಿಕ ಪ್ರಶ್ನೆಗಳು ಅಳಿದರೂ, ವೈಯಕ್ತಿಕ ಜೀವನಾನುಕೂಲತೆಗಳೂ ತೊಡಕು ಬಿಡಿಸುವ ಗಳಿಗೆಯೂ ಬರದೆ ಹೋಗುವದಿಲ್ಲ. ಜಗತ್ತನ್ನಾವರಿಸಿದ ಯುದ್ಧ ನಿಂತಿತು; ಭಾರತದ ಬಹುದಿನದ ಆಕಾಂಕ್ಷೆಯಾದ ಸಾತಂತ್ರ್ಯ ಲಭಿಸಿತು; ಸರಕಾರವು ನಮ್ಮದಾಯಿತು. ಆಯಿತು ! ಕೈ ನಮ್ಮದು ಬಾಯಿನಮ್ಮದು ಆಗಿ ಬಿಟ್ಟಿರುವಾಗ ಆ ಕೈ ಬಾಯಿಗಳ ಸಹಕಾರದಿಂದ ಹೊಟ್ಟೆತುಂಬ ಉಣ್ಣಬಹುದು; ಅದು ತಪ್ಪಿದರೆ ಮುಗಿಲ ಮುಟ್ಟುವಂತೆ ಬೊಬ್ಬಿಡಬಹುದು. ಅನ್ನ—ಅರಿವೆಯೆಂದು ಸಾಮಾನ್ಯಜನವೂ, ಅಪೇಕೆ, ಮಧ್ಯಮತರಗತಿಯ ಜನವೇ ವಿಶೇಷವಾಗಿ ಬೊಬ್ಬಿಡುತ್ತಿದೆ. ಕೆಡುಗಾಲ ಸರಿದರೂ ಅನ್ನ—ಅರಿವೆ ಸಿಗಲಿಲ್ಲ; ಸರಕಾರ ನಮ್ಮದಾದರೂ ಅನ್ನಅರಿವೆ ಸಿಗಲಿಲ್ಲ; ಪರಕೀಯರು ಕೊಡಲಿಲ್ಲವೆಂದರೆ ಒಪ್ಪೀತು. ತಮ್ಮವರಲ್ಲಿದ್ದರೂ ಕೊಡಲೊಲ್ಲರಲ್ಲಾ ಎಂದು ಯಾರಿಗೆ ಹೇಳಬೇಕು ? ಅಣ್ಣನ ಕಾಟವನ್ನು ತಮ್ಮನು ಹೇಳುವುದು ತಾಯಿ ತಂದೆಗಳಮುಂದೆ. ಅದಿಲ್ಲದಿದ್ದರೆ ಕಸಿದುಕೊಳ್ಳುವ ಕಡಿದಾಟ ಹೂಡುವದು. ಈ ಕಡಿದಾಟದಲ್ಲಿ ಕಸಿದುಕೊಳ್ಳುವವನು ಗೆದ್ದರೆ ಒಳ್ಳೆಯ ದಾದೀತು. ಆದರೆ ಸೋತರೆ ? ಅನ್ನಸಿಕ್ಕೀತೆ ? ಬಟ್ಟೆಸಿಕ್ಕೀತೆ ? ಹೃದಯ ಪರಿವರ್ತನವಾಗಬೇಕಷ್ಟೇ ? ಅದಕ್ಕೆ ಅದೇಉಪಾಯ, ಇದೇಉಪಾಯ, ಅದುಯೋಗ್ಯದಾರಿ, ಇದುಯೋಗ್ಯದಾರಿ ಎಂದು ಯುಕ್ತಿವಾದವನ್ನು ಯಾರು ಹೇಳಿದರೂ ಸಲ್ಲದು; ಸಾಕಾಗದು. ಹಸಿದವನು ಯಾವ ಪಾಪಕ್ಕೂ ಅಂಜುವದಿಲ್ಲ. ಹಸಿಯಗೊಟ್ಟ ಪಾಪ ಯಾರದು ? ಆ ಪಾಪದಿಂದ ಮುಕ್ತಗೊಳಿಸಿ, ಧರ್ಮವನ್ನು ನಿಲ್ಲಿಸುವ ಕೆಲಸಕ್ಕೆ 'ಕಲ್ಕಿ' ಯ ಅವತಾರವಾಗಬೇಕಾಗಿದೆ. ಅವತಾರವಾಗುವವರೆಗೆ ಇಲ್ಲವೆ, ಆದ ಅವತಾರವು ಪ್ರಕಟವಾಗುವ ವರೆಗೆ ಪರಿಸ್ಥಿತಿಯು ಇದಕ್ಕೂ ಹೆಚ್ಚಿಗೆ ಕೆಟ್ಟು, ದುರಂತವು ಇನ್ನೂ ಎಲ್ಲಿ ಮೀರುವ ಸಂಭವವಿದೆಯೆಂದೂ, ಉತ್ತಮವಾದ ನವಜಗದ ನಿರ್ಮಾಣಕ್ಕೆ ಇದೆಲ್ಲ ಅನಿವಾರ್ಯವೆಂದೂ ಶ್ರೀ ಅರವಿಂದರು ಹೇಳುತ್ತಾರೆ. ಇವೆಲ್ಲ ಅನಾಹುತಗಳು ಜಗತ್ತಿನ ಒಡಲಲ್ಲಿ ಸುಪ್ತವಾಗಿದ್ದ ದುಷ್ಟ ಶಕ್ತಿ

ಗಳನ್ನು ಪರಿಶುದ್ಧಗೊಳಿಸುತ್ತಿರುವ ಕಾರಖಾನೆಯ ಹೊಗೆಯೇ ಸರಿ. ಹೊಗೆಯಲ್ಲಿ ನಿಂತವನಿಗೆ ಕಣ್ಣುರಿದು, ಮುಂದಿನದು ಕಾಣದಾಗುವದು. ದುರ್ವಾಸನೆಯೇಳುವದು; ಕತ್ತಲೆ ಕವಿಯುವದು. ಹೊಸದಾಗಿ ನಿರ್ಮಾಣ ವಾಗುವ ನವಜಗತ್ತು ಜೀರ್ಣೋದ್ಧಾರಗೊಂಡ ಜಗತ್ತಲ್ಲ; ಹೊಸರಚನೆ ಯೊಡನೆ ಅಂತರಂಗದಿಂದ ಆವಿರ್ಭಾವಗೊಳ್ಳುವುದು. ಆದಕಾರಣ ಶ್ರೀ ಭಗವಾನರು ಇಂಥ ಅನಿವಾರ್ಯವಾದ ಈ ವಿಪರೀತ ಪ್ರಸಂಗದಲ್ಲಿ ಘಂಟಾ ಘೋಷವಾಗಿ ಹೇಳುವ ಮಾತನ್ನು ನಾವು ಯಾವಾಗಲೂ ಲಕ್ಷ್ಯದಲ್ಲಿಡ ತಕ್ಕುದಾಗಿದೆ.

"ಹೊರಗೆ ಸುತ್ತಲು ನಡೆದಿರುವ ಶೋಚನೀಯ ಘಟನೆಗಳಿಗಾಗಿ ಹೆಚ್ಚುತಲೆ ಕೆಡಿಸಿಕೊಳ್ಳದೆ, ಅಂತರ್ಮುಖರಾಗಿ ವಿಕಸನ ಹೊಂದಿ, ಅಪಾವ ರೂಪದಲ್ಲಿಯೇ ಬಂದ ನವಜಗಕ್ಕೆ ಸಿದ್ಧರಾಗಿರುವುದು ಒಳಿತು."

ಆದುದರಿಂದ ನಮ್ಮ ಇಚ್ಛೆಯಂತೆ ಇಲ್ಲವೆ ಎಣಿಕೆಯಂತೆ ನವಜಗತ್ತು ನಿರ್ಮಾಣಗೊಳ್ಳಲೆಂದು ಬಯಸದೆ, ಪರಮಾತ್ಮ ಸಂಕಲ್ಪಾನುಸಾರವಾಗಿ ಮಾತ್ರ ನವಜಗತ್ತು ನಿರ್ಮಾಣವಾಗಲೆಂದು ಹಾರಯಿಸಬೇಕಲ್ಲವೇ?



# ಕಲ್ಪನಾ ಗ್ರಂಥಮಾಲೆಯ ಪ್ರಕಟನೆಗಳು

| | | | | |
|---|---|---|---|---|
| ೧ | ಹಾಲಾಹಲ | ಹಿರೇಮಲ್ಲೂರ ಈಶ್ವರನ್ | ೧ | ೧೨ |
| ೨ | ರಾಮಣ್ಣ ಮಾಸ್ತರು | ಮಿರ್ಜಿ ಅಣ್ಣಾರಾಯ | ೨ | ೦ |
| ೩ | ಫಲ ಸಂಚಯ | ವರದರಾಜ ಹುಯಿಲಗೋಳ | ೧ | ೮ |
| ೪ | ರಾಜಾರಾಣಿ ದೇಖೋ | ಹಿರೇಮಲ್ಲೂರ ಈಶ್ವರನ್ | ೧ | ೮ |
| ೫ | ಶಿವನ ಬುಟ್ಟಿ | ಹಿರೇಮಲ್ಲೂರ ಈಶ್ವರನ್ | ೧ | ೮ |
| ೬ | ಮುಗಿಲ ಜೇನು | ಸಿಂಪಿ ಲಿಂಗಣ್ಣ | ೧ | ೮ |
| ೭ | ಕನ್ನಡ ತಾಯ್ ನೋಟ | ಹಿರೇಮಲ್ಲೂರ ಈಶ್ವರನ್ | ೧ | ೧೨ |
| ೮ | ಕಾಮಾಕ್ಷಿ | ಚೆನ್ನವೀರ ಕಣವಿ | ೧ | ೦ |
| ೯ | ಅರವಿಂದರ ಪತ್ರಗಳು | ಸಿಂಪಿ ಲಿಂಗಣ್ಣ | ೦ | ೮ |
| ೧೦ | ಕರ್ನಾಟಕದ ಸಮರಭೇರಿ | ಶ್ರೀಧರ ತೇಲ್ಕರ್ ಮತ್ತು ಹಿರೇಮಲ್ಲೂರ ಈಶ್ವರನ್ | ೧ | ೪ |
| ೧೧ | ಭಾರತದ ಭವ್ಯ ಸಿದ್ಧತೆ | ಸಿಂಪಿ ಲಿಂಗಣ್ಣ | ೧ | ೦ |

**ಕಲ್ಪನಾ ಗ್ರಂಥ ಪ್ರಕಾಶನ ಸಮಿತಿ**

ಹುಬ್ಬಳ್ಳಿ